# ಕರ್ನಾಟಕ ವಿಧಾನ ಸಭೆ
## 15ನೇ ವಿಧಾನ ಸಭೆ 8ನೇ ಅಧಿವೇಶನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 95
ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್. (ದೇವನಹಳ್ಳಿ)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ಅಣ್ಣೇಶ್ವರ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅನಧಿಕೃತ ಜಾಹೀರಾತು ಫಲಕಗಳನ್ನು ಅಳವಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೇಯೇ; (ವಿವರ ನೀಡುವುದು) | ಅಣ್ಣೇಶ್ವರ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಗ್ರಾಮ ಪಂಚಾಯತಿಯ ಪೂರ್ವಾನುಮೋದನೆ ಪಡೆದು 60 ಜಾಹೀರಾತು ಫಲಕಗಳನ್ನು ಅಳವಡಿಸಲಾಗಿದೆ. |
| (ಆ) | ಹಾಗಿದ್ದಲ್ಲಿ, ಎಷ್ಟು ಅನಧಿಕೃತ ಜಾಹೀರಾತು ಫಲಕಗಳನ್ನು ಅಳವಡಿಸಲಾಗಿದೆ; | ಅಣ್ಣೇಶ್ವರ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಅನಧಿಕೃತವಾಗಿ ಜಾಹೀರಾತು ಫಲಕಗಳನ್ನು ಅಳವಡಿಸಿರುವುದಿಲ್ಲ. |
| (ಇ) | ಇವುಗಳನ್ನು ತೆರವುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |
| (ಈ) | ಹಾಗಿದ್ದಲ್ಲಿ, ಈ ಜಾಹೀರಾತು ಫಲಕಗಳನ್ನು ಅನಧಿಕೃತವಾಗಿ ಅಳವಡಿಸಿರುವುದರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವೆಷ್ಟು; ಇದರ ವಸೂಲಿಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ. |
| (ಉ) | ಈ ರೀತಿ ಅನಧಿಕೃತ ಫಲಕಗಳನ್ನು ಅಳವಡಿಸಿದರೂ ಸರ್ಕಾರ ಗಮನಹರಿಸದಿರಲು ಕಾರಣಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |

ಸಂ. ಗ್ರಾಅಪ 856 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಃ | 121 |
| ಸದಸ್ಯರ ಹೆಸರು | ಃ | ಶ್ರೀ.ಐಹೊಳೆ.ಡಿ.ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸುವ ದಿನಾಂಕ | ಃ | 09.12.2020 |
| ಉತ್ತರಿಸುವ ಸಚಿವರು | ಃ | ಪಶುಸಂಗೋಪನೆ ಹಾಗೂ ಹಜ್ & ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲೆ ರಾಯಭಾಗ ಮತಕ್ಷೇತ್ರದ ರಾಯಭಾಗ ಹಾಗೂ ಚಿಕ್ಕೋಡಿ ತಾಲ್ಲೂಕುಗಳಲ್ಲಿರುವ ಪಶು ಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ ಯಾವ ಕಾಲಮಿತಿಯಲ್ಲಿ ಈ ಪಶು ಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗುವುದು; | ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 278 ಪಸಸೇ 2016, ದಿನಾಂಕ: 09.10.2017 ಅನ್ವಯ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು 2017-18 ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಹಂತ ಹಂತವಾಗಿ ಮೇಲ್ದರ್ಜೆಗೇರಿಸಲು ಕಾರ್ಯಕ್ರಮ ಹಮ್ಮಿಕೊಳ್ಳಲಾಗಿರುತ್ತದೆ. 2017-18 ನೇ ಸಾಲಿನಲ್ಲಿ ಈಗಾಗಲೇ 302 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿರುತ್ತದೆ. ಉಳಿದಂತೆ 2018-19 ನೇ ಸಾಲಿನಲ್ಲಿ 400 ಹಾಗೂ 2019-20 ನೇ ಸಾಲಿನಲ್ಲಿ 400 ಒಟ್ಟು 800 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತಾಲಯಗಳನ್ನಾಗಿ ಮೇಲ್ದರ್ಜೆಗೇರಿಸಬೇಕಾಗಿದ್ದು, ಈ ಸಂಬಂಧ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿರುತ್ತದೆ. ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಅದ್ಯತೆ ಮೇರೆಗೆ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮ ವಹಿಸಲಾಗುವುದು. |
| ಇ) | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | ಅನ್ವಯಿಸುವುದಿಲ್ಲ |

**ಸಂ: ಪಸಂಮೀ ಇ-182 ಪಸಸೇ 2020**

(ಪ್ರಭು. ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಹಾಲಪ್ಪ ಹರತಾಳ್ ಹೆಚ್ (ಸಾಗರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 126

ಉತ್ತರಿಸಬೇಕಾದ ದಿನಾಂಕ : 09.12.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪಶುಸಂಗೋಪನೆ ಇಲಾಖೆಯಲ್ಲಿ ಸಾಗರ ಮತ್ತು ಹೊಸನಗರ ತಾಲ್ಲೂಕುಗಳಲ್ಲಿ ಎತ್ತು, ಎಮ್ಮೆ, ಹಸುಗಳ ಆಕಸ್ಮಿಕ ಮರಣದಿಂದಾಗಿ ಆರ್ಥಿಕ ನಷ್ಟ ಅನುಭವಿಸುತ್ತಿರುವ ಫಲಾನುಭವಿಗಳಿಗೆ ಪರಿಹಾರವನ್ನು ನೀಡಲು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 81 ಪಪಾಯೋ 2017 ದಿನಾಂಕ: 05.08.2017 ರಂತೆ ವಿಮೆಗೆ ಒಳಪಡದ ಎತ್ತು ಮತ್ತು ಹಸುಗಳು ಆಕಸ್ಮಿಕವಾಗಿ ಮೃತಪಟ್ಟ ಸಂದರ್ಭದಲ್ಲಿ ಮಾರುಕಟ್ಟೆ ಮೌಲ್ಯದನುಸಾರ ಗರಿಷ್ಟ ರೂ.10,000/- ಮಿತಿಯೊಳಗೆ ಪರಿಹಾರಧನವನ್ನು ನೀಡುವ ಸೌಲಭ್ಯವನ್ನು 2017-18ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾಗಿತ್ತು. ಸದರಿ ಕಾರ್ಯಕ್ರಮವು 2018-19 ಹಾಗೂ 2019-20 ನೇ ಸಾಲಿನಲ್ಲಿಯೂ ಜಾರಿಯಲ್ಲಿರುತ್ತದೆ. ಆದರೆ, 2019-20ನೇ ಸಾಲಿನಲ್ಲಿ ಸಾಮಾನ್ಯ ವರ್ಗದ ಫಲಾನುಭವಿಗಳನ್ನು ಹೊರತುಪಡಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಮಾತ್ರ ಅನುದಾನ ಬಿಡುಗಡೆಯಾಗಿದೆ. ಸಾಗರ ಹಾಗೂ ಹೊಸನಗರ ತಾಲ್ಲೂಕಿನ ರೈತರುಗಳಿಗೆ ಅನುದಾನ ಲಭ್ಯತೆ ಹಾಗೂ ಪ್ರಸ್ತಾವನೆ ಸ್ವೀಕೃತಿಯ ಜ್ಯೇಷ್ಠತೆಯನ್ವಯ ಪರಿಹಾರ ಧನ ನೀಡಲಾಗಿದೆ. |
| ಆ | ಬಂದಿದ್ದಲ್ಲಿ ಪರಿಹಾರ ನೀಡಲು ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು? | |
| ಇ | ಹಾಗಿದ್ದಲ್ಲಿ, ಈ ಪ್ರಾಣಿಗಳ ಆಕಸ್ಮಿಕ ಮರಣದಿಂದಾಗಿ ಆರ್ಥಿಕ ನಷ್ಟ ಅನುಭವಿಸುತ್ತಿರುವ ಫಲಾನುಭವಿಗಳಿಗೆ ಪರಿಹಾರವನ್ನು ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು (ವಿವರ ಒದಗಿಸುವುದು) | ಸಾಗರ ಹಾಗೂ ಹೊಸನಗರ ತಾಲ್ಲೂಕಿನ ರೈತರುಗಳಿಗೆ ಅನುದಾನ ಲಭ್ಯತೆ ಹಾಗೂ ಪ್ರಸ್ತಾವನೆ ಸ್ವೀಕೃತಿಯ ಜ್ಯೇಷ್ಠತೆಯನ್ವಯ ಪರಿಹಾರ ಧನ ನೀಡಲಾಗಿದೆ. |

| ತಾಲ್ಲೂಕು | 2017-18 | 2018-19 | 2019-20 |
|---|---|---|---|
| ಸಾಗರ | 17 | 149 | 37 |
| ಹೊಸನಗರ | 4 | 33 | 12 |

ಪಸಂಮೀ ಇ-300 ಸಲೆವಿ 2020

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 130 |
| ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ (ಸೊರಬ) |
| ಉತ್ತರಿಸಬೇಕಾದ ದಿನಾಂಕ | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಸೊರಬದಲ್ಲಿ ಸಾವಿರಾರು ಕಿ.ಮೀ ಗ್ರಾಮೀಣ ರಸ್ತೆ ಅತ್ಯಂತ ಕೆಟ್ಟ ಪರಿಸ್ಥಿಯಲ್ಲಿದ್ದು, ಸದರಿ ರಸ್ತೆಗಳ ಅಭಿವೃದ್ಧಿಗೆ ಪ್ರಸ್ತುತ ಆರ್ಥಿಕ ವರ್ಷದಲ್ಲಿ ಅನುದಾನ ಬಿಡುಗಡೆ ಮಾಡುವ ಯೋಜನೆಯನ್ನು ಸರ್ಕಾರ ಹೊಂದಿದೆಯೇ; | ಪ್ರಸಕ್ತ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದ ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಹಾನಿಗೊಳಗಾದ ಒಟ್ಟು 333.00 ಕಿ.ಮೀ ಉದ್ದದ ರಸ್ತೆ ದುರಸ್ತಿಗಾಗಿ ಒಟ್ಟು ರೂ.664.95 ಗಳ ಅನುದಾನ ಒದಗಿಸುವಂತೆ ಕಂದಾಯ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. |
| ಆ. | ಪ್ರಸ್ತುತ ಆರ್ಥಿಕ ವರ್ಷದಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಮೂಲಕ ಎಷ್ಟು ಶಾಲೆಗಳಿಗೆ ನೂತನ ಅಡುಗೆ ಕೋಣೆ ಹಾಗೂ ಶೌಚಾಲಯಗಳನ್ನು ನಿರ್ಮಿಸುವ ಯೋಜನೆಯನ್ನು ಸರ್ಕಾರ ಹೊಂದಿದೆ? | ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುದಾನ ಹಾಗೂ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿ<br>• ಶಿವಮೊಗ್ಗ ಜಿಲ್ಲಾ ವ್ಯಾಪ್ತಿಯ ಪ್ರಾಥಮಿಕ ಶಾಲೆಗಳು-18 ಹಾಗೂ ಪ್ರೌಢ ಶಾಲೆಗಳು-04 ಒಟ್ಟು 22 ಶಾಲೆಗಳಲ್ಲಿ ಅಡುಗೆ ಕೋಣೆಗಳು.<br>• ಸರ್ಕಾರಿ ಪ್ರಾಥಮಿಕ ಶಾಲೆಗಳ 28 ಮತ್ತು ಸರ್ಕಾರಿ ಪ್ರೌಢ ಶಾಲೆಗಳ 16 ಒಟ್ಟು 44 ಶೌಚಾಲಯಗಳನ್ನು ನಿರ್ಮಿಸುವ ಗುರಿ ಹೊಂದಲಾಗಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-08/04:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

<u>ಕರ್ನಾಟಕ ವಿಧಾನ ಸಭೆ</u>

<u>15ನೇ ವಿಧಾನ ಸಭೆ 8ನೇ ಅಧಿವೇಶನ</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 261
ಸದಸ್ಯರ ಹೆಸರು : ಶ್ರೀ ಭೀಮಾ ನಾಯ್ಕ ಎಸ್. (ಹಗರಿಬೊಮ್ಮನಹಳ್ಳಿ)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿ ಕಟ್ಟಡಗಳು ತೀರಾ ಹಳೆಯದಾಗಿದ್ದು, ನೂತನ ಕಟ್ಟಗಳನ್ನು ನಿರ್ಮಾಣ ಮಾಡುವ ಯೋಜನೆ ಸರ್ಕಾರದಲ್ಲಿದೆಯೇ? (ಸಂಪೂರ್ಣ ವಿವರ ನೀಡುವುದು) | ಹಗರಿಬೊಮ್ಮನಹಳ್ಳಿ ತಾಲ್ಲೂಕು ಪಂಚಾಯತಿ ಕಟ್ಟಡದ ಸಭಾ ಭವನ ಶಿಥಿಲಗೊಂಡಿದ್ದು, ತಾಲ್ಲೂಕು ಪಂಚಾಯತಿ ನಿಧಿ-3 ರ ಅನುದಾನದಡಿ ದುರಸ್ತಿಗೊಳಿಸಲು ಕ್ರಮ ವಹಿಸಲಾಗುವುದು.<br><br>ಹಗರಿಬೊಮ್ಮನಹಳ್ಳಿ ತಾಲ್ಲೂಕಿನ 1) ಬನ್ನಿಗೋಳ, 2) ಬನ್ನಿಕಲ್ಲು, 3)ದಶಮಾಪುರ, 4)ಅನಸಿ, 5) ಮರಬ್ಬಿಹಾಳು ಮತ್ತು 6) ಸೊನ್ನ ಗ್ರಾಮ ಪಂಚಾಯತಿ ಕಛೇರಿ ಕಟ್ಟಡಗಳು ಶಿಥಿಲಗೊಂಡಿದ್ದು, ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ರಾಜೀವ್ ಗಾಂಧಿ ಸೇವಾ ಕೇಂದ್ರ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದು.<br><br>ಮುಂದುವರೆದು, 1) ನೆಲ್ಕುದ್ರಿ-1, 2) ವಲ್ಲಭಾಪುರ ಮತ್ತು 3) ಮಾದೂರು, ಹೊಸ ಗ್ರಾಮ ಪಂಚಾಯತಿಗಳಾಗಿ ರಚನೆಯಾಗಿದ್ದು, ಸ್ವಂತ ಕಟ್ಟಡವನ್ನು ಹೊಂದಿರುವುದಿಲ್ಲ. ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ರಾಜೀವ್ ಗಾಂಧಿ ಸೇವಾ ಕೇಂದ್ರ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದು. |

ಸಂ. ಗ್ರಾಅಪ 854 ಗ್ರಾಪಂಅ 2020

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ವೆಂಕಟರಮಣಯ್ಯ .ಟಿ. (ದೊಡ್ಡಬಳ್ಳಾಪುರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 264 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 09.12.2020 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನೇಕಾರರು ಹೊಸ ಘಟಕವನ್ನು ಪ್ರಾರಂಭಿಸುವುದಕ್ಕಾಗಿ ವಿದ್ಯುತ್ ಪಡೆಯಲು ಸಹಾಯ ಧನವನ್ನು ನಿಲ್ಲಿಸಿರುವುದರಿಂದ ನೇಕಾರರು ಆರ್ಥಿಕವಾಗಿ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ನೇಕಾರರು ವಿದ್ಯುತ್ ಪಡೆಯಲು ಸಹಾಯಧನವನ್ನು ನೀಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ವಿದ್ಯುತ್ ಮಗ್ಗ ನೇಕಾರರು ಹೊಸ ಘಟಕವನ್ನು ಪ್ರಾರಂಭಿಸುವುದಕ್ಕಾಗಿ ವಿದ್ಯುತ್ ಪಡೆಯಲು ನಿಲ್ಲಿಸಿರುವ ಸಹಾಯಧನವನ್ನು ನೀಡಲು ಹಾಗೂ ವಿವಿಧ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಬಾಕಿ ಹಣ ರೂ.215.63 ಕೋಟಿಗಳನ್ನು ಪಾವತಿಸಲು ಕ್ರಮಕೈಗೊಳ್ಳಲಾಗುತ್ತಿದೆ. |

ಸಂ: ವಾಕೈ 252 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ .ಟಿ. (ದೊಡ್ಡಬಳ್ಳಾಪುರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 265

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 09.12.2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನೇಕಾರರ ಸಂಕಷ್ಟಕ್ಕೆ ನೆರವಾಗಲು ನೇಕಾರರಿಂದ ಉತ್ಪಾದನೆಯಾದ ಸೀರೆಗಳನ್ನು ಪ್ರತಿ ವರ್ಷವು ಜವಳಿ ಇಲಾಖೆಯು ಖರೀದಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಬಂದಿದ್ದಲ್ಲಿ, ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಉದ್ಭವಿಸುವುದಿಲ್ಲ |

ಸಂ: ವಾಕೈ 250 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ – 409

ಉತ್ತರಿಸಬೇಕಾದ ದಿನಾಂಕ – 09-12-2020

ಸದಸ್ಯರ ಹೆಸರು – ಶ್ರೀ.ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ)

ಉತ್ತರಿಸುವ ಸಚಿವರು – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಲ್ಪಸಂಖ್ಯಾತರಿಗೆ ಮನೆ ನಿರ್ಮಾಣ ಮಾಡಲು ಸರ್ಕಾರದಿಂದ ಅನುದಾನ ನೀಡುವ ಯೋಜನೆ ಸರ್ಕಾರದ ಪರಿಶೀಲನೆಯಲ್ಲಿ ಇದೆಯೇ; ಹಾಗಿದ್ದಲ್ಲಿ, ಯಾವ ಹಂತದಲ್ಲಿದೆ? (ವಿವರ ನೀಡುವುದು) | ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮವು 2020-21ನೇ ಸಾಲಿಗೆ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯ ಮೂಲಕ ಆಯ್ಕೆಯಾದ 133 ಫಲಾನುಭವಿಗಳಿಗೆ ಗರಿಷ್ಠ ರೂ.1.00ಲಕ್ಷದಂತೆ ಮಾರ್ಜಿನ್ ಹಣ ಸಾಲ ನೀಡಲು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಮುಂಗಡವಾಗಿ ರೂ.1.00ಕೋಟಿ ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ:MWD 181 LMQ 2020

(ಶ್ರೀಮಂತ ಬಾಳಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

1. ಸದಸ್ಯರ ಹೆಸರು : ಶ್ರೀ ಭರತ್ ಶೆಟ್ಟಿ ವೈ. ಡಾ|| (ಮಂಗಳೂರು ನಗರ ಉತ್ತರ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 411
3. ಉತ್ತರಿಸಬೇಕಾದ ದಿನಾಂಕ : 09-12-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಎನ್. ಆರ್. ಇ. ಜಿ. ಎ. ಯೋಜನೆ ಅಡಿಯಲ್ಲಿ ಗ್ರಾಮ ಪಂಚಾಯತಿಗಳಿಗೆ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2020-21ನೇ ಸಾಲಿನಲ್ಲಿ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿ ಕೂಲಿ ಮತ್ತು ಸಾಮಗ್ರಿ ವೆಚ್ಚಕ್ಕಾಗಿ ಅನುದಾನವನ್ನು ನಿಯಮಿತವಾಗಿ ಬಿಡುಗಡೆ ಮಾಡಲಾಗುತ್ತಿದೆ. ಬಿಡುಗಡೆ ಮಾಡಲಾದ ಅನುದಾನದ ವಿವರ ಕೆಳಕಂಡಂತಿದೆ.<br>ಕೂಲಿ ವೆಚ್ಚ ರೂ. 2998.47 ಕೋಟಿ<br>ಸಾಮಗ್ರಿ ವೆಚ್ಚ ರೂ. 975.08 ಕೋಟಿ |
| ಆ) | ಬಸವ ವಸತಿ ಯೋಜನೆಯ ಕೆಲವೊಂದು ಕಂತು ಬಿಡುಗಡೆಗೆ ವಿಳಂಬವಾಗಲು ತಾಂತ್ರಿಕ ದೋಷಗಳನ್ನು ಪರಿಹರಿಸಲು ಕ್ರಮ ಕೈಗೊಳ್ಳಲಾಗಿದೆಯೇ; | ಅನ್ವಯಿಸುವುದಿಲ್ಲ. |
| ಇ) | ಗ್ರಾಮ ಪಂಚಾಯತ್ ಮಟ್ಟದಲ್ಲಿ ಆಧಾರ್ ನೋಂದಣಿ ಮತ್ತು ತಿದ್ದುಪಡಿ ಕಾರ್ಯನಿರ್ವಹಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದೇ? | ಅನ್ವಯಿಸುವುದಿಲ್ಲ. |

ಸಂಖ್ಯೆ: ಗ್ರಾಅಪ 38(253) ಉಖಾಯೋ 2019

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಃ | 479 |
| ಸದಸ್ಯರ ಹೆಸರು | ಃ | ಶ್ರೀ.ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸುವ ದಿನಾಂಕ | ಃ | 09.12.2020 |
| ಉತ್ತರಿಸುವ ಸಚಿವರು | ಃ | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲಾ ಕಿತ್ತೂರು ತಾಲ್ಲೂಕಿನಲ್ಲಿ ತಾಲ್ಲೂಕು ಮಟ್ಟದ ಪಶು ಸಂಗೋಪನಾ ಇಲಾಖೆ ಮತ್ತು ತಾಲ್ಲೂಕು ಪಶು ಆಸ್ಪತ್ರೆ ಆರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಈ ಕುರಿತು ಸರ್ಕಾರದ ಕ್ರಮವೇನು; | ಪ್ರಸ್ತುತ ಆರ್ಥಿಕ ನಿರ್ಬಂಧವಿರುವ ಹಿನ್ನಲೆಯಲ್ಲಿ ಹೊಸ ತಾಲ್ಲೂಕುಗಳಲ್ಲಿ ಪಶು ಆಸ್ಪತ್ರೆ ಪ್ರಾರಂಭಿಸುವ ಪ್ರಸ್ತಾವನೆಯನ್ನು ಮುಂದಿನ 02 ವರ್ಷಗಳವರೆಗೆ ಮುಂದೂಡುವಂತೆ ಆರ್ಥಿಕ ಇಲಾಖೆಯು ತಿಳಿಸಿದ್ದು, ಸಹಮತಿ ನೀಡಿರುವುದಿಲ್ಲ. ಆದುದರಿಂದ ತಾತ್ಕಾಲಿಕವಾಗಿ ಈ ಪ್ರಕ್ರಿಯೆಯನ್ನು ಮುಂದೂಡಲಾಗಿರುತ್ತದೆ. |
| ಇ) | ಯಾವ ಕಾಲಮಿತಿಯಲ್ಲಿ ಈ ಕುರಿತು ಕ್ರಮಕ್ಕೈಗೊಳ್ಳಲಾಗುವುದು? | ಆರ್ಥಿಕ ಇಲಾಖೆಯ ಸಹಮತಿ ನಂತರ ಕಿತ್ತೂರು ತಾಲ್ಲೂಕಿನಲ್ಲಿ ಈಗಾಗಲೇ ಪಶು ಆಸ್ಪತ್ರೆ ಕಾರ್ಯನಿರ್ವಹಿಸುತ್ತಿದ್ದು, ಸದರಿ ಸಂಸ್ಥೆಯನ್ನು ತಾಲ್ಲೂಕು ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗುವುದು. |

**ಸಂ: ಪಸಂಮೀ ಇ-183 ಪಸಸೇ 2020**

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 480
ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ
ಉತ್ತರಿಸುವ ದಿನಾಂಕ : 09.12.2020
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರ ಇಲಾಖಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ತಾಲ್ಲೂಕು ಕೇಂದ್ರದಲ್ಲಿ ಶಿಶು ಅಭಿವೃದ್ಧಿ ಯೋಜನಾ ಇಲಾಖೆ ಆರಂಭಿಸುವ ಪ್ರಸ್ತಾವನೆ ಇರುವುದು ನಿಜವೇ; | ಹೌದು |
| ಆ) | ಹಾಗಿದ್ದಲ್ಲಿ, ಕಿತ್ತೂರು ತಾಲ್ಲೂಕು ಕೇಂದ್ರದಲ್ಲಿ ಶಿಶು ಅಭಿವೃದ್ಧಿ ಯೋಜನಾ ಇಲಾಖೆ ಆರಂಭಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳುವುದು; | ಕಿತ್ತೂರಿನಲ್ಲಿ ಹೊಸದಾಗಿ ಶಿಶು ಅಭಿವೃದ್ಧಿ ಯೋಜನೆಯನ್ನು ಪ್ರಾರಂಭಿಸುವ ಕುರಿತು ಸಂಬಂಧಿಸಿದ ಜಿಲ್ಲಾ ಉಪ ನಿರ್ದೇಶಕರಿಂದ ಪಡೆಯಲಾದ ಪ್ರಸ್ತಾವನೆಗೆ ಕೇಂದ್ರ ಸರ್ಕಾರದ ಸಹಮತಿ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದೆ. |
| ಇ) | ಯಾವ ಕಾಲಮಿತಿಯಲ್ಲಿ ಸದರಿ ಪ್ರಸ್ತಾವನೆ ಕುರಿತು ಕ್ರಮ ಕೈಗೊಳ್ಳಲಾಗುವುದು? | ಕೇಂದ್ರ ಸರ್ಕಾರದ ಅನುಮತಿ ದೊರೆತ ಕೂಡಲೇ ಕಿತ್ತೂರು ತಾಲ್ಲೂಕಿನಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಕಛೇರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು. |

ಸಂ. ಮಮಇ 321 ಎಸ್‌ಜೆಡಿ 2020

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖಾ ಸಚಿವರು.



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 482

ಸದಸ್ಯರ ಹೆಸರು : ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ)

ಉತ್ತರಿಸಬೇಕಾದ ದಿನಾಂಕ : 09/12/2020

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರದ ಹಲಗನಹಳ್ಳಿ ಗ್ರಾಮದಲ್ಲಿ ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆ ಕಟ್ಟಡ ನಿರ್ಮಾಣ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಹೌದು. |
| ಆ | ಸರ್ಕಾರ ಅಗತ್ಯ ಜಮೀನು ಪಡೆದು ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣ ಮಾಡಲು ಸರ್ಕಾರಕ್ಕಿರುವ ತೊಂದರೆಯೇನು; | ಹಲಗನಹಳ್ಳಿ ಗ್ರಾಮದಲ್ಲಿ ಮಂಜೂರಾಗಿದ್ದ 10.00 ಎಕರೆ ಜಮೀನನ್ನು ಅರಣ್ಯ ಇಲಾಖೆಯವರು ಆಕ್ಷೇಪಣೆ ವ್ಯಕ್ತಿಪಡಿಸಿರುವ ಹಿನ್ನೆಲೆಯಲ್ಲಿ ಪರ್ಯಾಯವಾಗಿ ಮಾನ್ಯ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ರವರು ಅನೀವಾಳ ಗ್ರಾಮದಲ್ಲಿ 6.00 ಎಕರೆ ಜಮೀನನ್ನು ಮಂಜೂರು ಮಾಡಿದ್ದು, ಸದರಿ ಸ್ಥಳದಲ್ಲಿ ವಸತಿ ಶಾಲೆಯ ಕಟ್ಟಡ ನಿರ್ಮಾಣದ ಕಾಮಗಾರಿಯನ್ನು ಕೈಗೊಳ್ಳಲು ಡಿ.ಪಿ.ಆರ್, ಅಂದಾಜುಪಟ್ಟಿ, ಮತ್ತು ನಕ್ಷೆಯನ್ನು ತಯಾರಿಸಲಾಗಿದೆ. |
| ಇ | ಈ ಕಟ್ಟಡ ನಿರ್ಮಾಣ ಮಾಡಲು ಎಷ್ಟು ಅನುದಾನ ನೀಡಲಾಗಿದೆ: ನಿಗಧಿತ ಅವಧಿಯಲ್ಲಿ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ ಸರ್ಕಾರದ ಕ್ರಮವೇನು? | ಸದರಿ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ರೂ.10.00 ಕೋಟಿಗಳ ಡಿ.ಪಿ.ಆರ್ ಅಂದಾಜು ಪಟ್ಟಿ ಮತ್ತು ನಕ್ಷೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

ಸಂಖ್ಯೆ: MWD 184 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 484 |
| ಸದಸ್ಯರ ಹೆಸರು | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸಬೇಕಾದ ದಿನಾಂಕ | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಪಿರಿಯಾಪಟ್ಟಣ ಮತ ಕ್ಷೇತ್ರದಲ್ಲಿ 2020ರಲ್ಲಿ ಅಧಿಕವಾಗಿ ಬಿದ್ದ ಮಳೆ ಪ್ರವಾಹದಿಂದ ಗ್ರಾಮೀಣ ರಸ್ತೆಗಳು, ಚರಂಡಿಗಳು ಹಾಗೂ ಕೆರೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ. | ಪ್ರವಾಹದಿಂದ ರಸ್ತೆಗಳು, ಚರಂಡಿಗಳು, ಕೆರೆಗಳು, ನಾಶವಾಗಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇವುಗಳ ಕಾಮಗಾರಿಗೆ ಎಷ್ಟು ಕೋಟಿ ರೂಗಳ ಅನುದಾನ ಅಗತ್ಯವಿದೆ; | ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳ ವಿವರಗಳನ್ನು ಮುಖ್ಯ ಇಂಜಿನಿಯರ್, ಪಿ.ಆರ್.ಇ.ಡಿ. ಹಾಗೂ ಮುಖ್ಯ ಕಾರ್ಯಾಚರಣೆ ಅಧಿಕಾರಿಗಳು, ಕೆ.ಆರ್.ಆರ್.ಡಿ.ಎ ರವರುಗಳಿಂದ ಪಡೆದು ಕ್ರೋಢೀಕರಿಸಿ ರೂ.110531.61 ಲಕ್ಷಗಳ ಅನುದಾನಕ್ಕೆ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ರವರಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಇದರಲ್ಲಿ ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ತಾಲ್ಲೂಕಿನ ರಸ್ತೆ ಕಾಮಗಾರಿಗಳಿಗೆ ರೂ.600.00 ಲಕ್ಷಗಳು ಸೇತುವೆಗಳಿಗಾಗಿ ರೂ.11.40 ಲಕ್ಷಗಳು ಹಾಗೂ ಕೆರೆಗಳಿಗೆ ರೂ. 20.00 ಲಕ್ಷಗಳು ಸೇರಿರುತ್ತದೆ. |
| ಇ. | ಪಿರಿಯಾಪಟ್ಟಣ ಮತ ಕ್ಷೇತ್ರದಲ್ಲಿ ಮಳೆ ಪ್ರವಾಹದಿಂದ ನಾಶವಾಗಿರುವ ರಸ್ತೆಗಳು ಚರಂಡಿ ಕೆರೆ ಅಭಿವೃದ್ಧಿ ಮಾಡಲು ಯಾವ ಕಾಲಮಿತಿಯಲ್ಲಿ ಕಾಮಗಾರಿಗಳನ್ನು ಪುನರ್ ನಿರ್ಮಾಣ ಮಾಡಲಾಗುವುದು ಇದಕ್ಕೆ ಒದಗಿಸಿರುವ ಅನುದಾನ ಎಷ್ಟು? | ಅನುದಾನ ಬಿಡುಗಡೆಯಾದ ನಂತರ ರಸ್ತೆ, ಕೆರೆಗಳು ಹಾಗೂ ಸೇತುವೆಗಳ ಅಭಿವೃದ್ಧಿಗೆ ಅನುದಾನವನ್ನು ಹಂಚಿಕೆ ಮಾಡಬೇಕಾಗಿದೆ. |

ಕಡತ ಸಂಖ್ಯೆ: ಗ್ರಾಅಪ:08/11:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಅವಿನಾಶ ಉಮೇಶ್ ಜಾಧವ್ ಡಾ: (ಚಿಂಚೋಳಿ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 486

ಉತ್ತರಿಸಬೇಕಾದ ದಿನಾಂಕ : 09.12.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಚಿಂಚೋಳಿ ವಿಧಾನ ಸಭಾ ಮತಕ್ಷೇತ್ರ ವ್ಯಾಪ್ತಿಯ ಚಿಂಚೋಳಿ ಪಟ್ಟಣದಲ್ಲಿ ಸುಮಾರು 50 ವರ್ಷಗಳ ಹಿಂದೆ ನಿರ್ಮಾಣವಾದ ಪಶುಸಂಗೋಪನಾ ಇಲಾಖೆ ಕಛೇರಿ ಕಟ್ಟಡ ಪ್ರಸ್ತುತ ಶಿಥಿಲಾವಸ್ಥೆಯಲ್ಲಿದ್ದು, ಮಳೆಗಾಲದಲ್ಲಿ ನೀರು ಸೋರಿ ಕಛೇರಿ ಕಡತಗಳು ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಕಛೇರಿ ಕಟ್ಟಡವು ಶಿಥಿಲಾವಸ್ಥೆಯಲ್ಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಬಂದಿದ್ದಲ್ಲಿ, ಈ ಕಛೇರಿ ಕಟ್ಟಡವನ್ನು ನಿರ್ಮಾಣ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆಯೇ? | ಕಟ್ಟಡ ದುರಸ್ಥಿಗಾಗಿ 2021-22ನೇ ಸಾಲಿನ ಜಿಲ್ಲಾ ಪಂಚಾಯತ್ ಕ್ರಿಯಾ ಯೋಜನೆಯಡಿ ಪ್ರಸ್ತಾವನೆ ಸಲ್ಲಿಸಲಾಗುವುದು. |
| ಇ | ಹಾಗಿದ್ದಲ್ಲಿ, ಸರ್ಕಾರ ಸದರಿ ಕಟ್ಟಡ ನಿರ್ಮಾಣಕ್ಕೆ ಯಾವ ಕ್ರಮಗಳನ್ನು ಕೈಗೊಂಡಿದೆ: (ಸಂಪೂರ್ಣ ಮಾಹಿತಿ ಒದಗಿಸುವುದು) | ಲೋಕೋಪಯೋಗಿ ಇಲಾಖೆಯಿಂದ ಕಟ್ಟಡದ ಸ್ಥಿತಿಗತಿಯ ಬಗ್ಗೆ ವರದಿ ಪಡೆದು, ಕಟ್ಟಡ ದುರಸ್ಥಿ / ನಿರ್ಮಾಣಕ್ಕೆ ಮುಂದಿನ ಅಗತ್ಯ ಕ್ರಮ ವಹಿಸಲಾಗುವುದು. |

ಪಸಂಮೀ ಇ-309 ಸಲೆವಿ 2020

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು.

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್ (ದೇವನಹಳ್ಳಿ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 488

ಉತ್ತರಿಸಬೇಕಾದ ದಿನಾಂಕ : 09.12.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ಜನರು ಹೆಚ್ಚಾಗಿ ಹೈನುಗಾರಿಕೆಯಲ್ಲಿ ತೊಡಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 46260 ಕುಟುಂಬಗಳಿದ್ದು, ಇದರಲ್ಲಿ 15907 ಕುಟುಂಬಗಳು (ಶೇ:34) ಹೈನುಗಾರಿಕೆಯಲ್ಲಿ ತೊಡಗಿಸಿಕೊಂಡಿರುತ್ತಾರೆ. 33493 ಮಿಶ್ರ ತಳಿ ರಾಸುಗಳಿದ್ದು, ಪ್ರತಿ ದಿನ 108000 ಲೀಟರ್ ಹಾಲನ್ನು ಉತ್ಪಾದಿಸಲಾಗುತ್ತಿದೆ. |
| ಆ | ಬಂದಿದ್ದಲ್ಲಿ, ಈ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬಿದಲೂರು ಗ್ರಾಮಪಂಚಾಯಿತಿ ಕೇಂದ್ರವಾಗಿದ್ದು ಈ ಗ್ರಾಮಕ್ಕೆ ಹೊಂದಿಕೊಂಡಂತೆ 5-6 ಗ್ರಾಮಗಳಿಗೆ ಪಶು ಚಿಕಿತ್ಸಾಲಯವಾಗಲಿ, ಕೃತಕ ಗರ್ಭಧಾರಣೆ ಕೇಂದ್ರವಾಗಲಿ ಇಲ್ಲದೆ ರೈತರಿಗೆ ತುಂಬಾ ತೊಂದರೆಯಾಗಿರುವುದು ನಿಜವೇ; ಈ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಂಡಿದೆ; (ಮಾಹಿತಿ ನೀಡುವುದು ) | ಬಿದಲೂರು ಗ್ರಾಮ ಪಂಚಾಯಿತಿಯಿಂದ ಮೂರು ಕಿಲೋಮೀಟರ್ ದೂರದ ಕೋಡಗುರ್ಕಿ ಗ್ರಾಮದಲ್ಲಿ ಸರ್ಕಾರವು ಪಶು ಚಿಕಿತ್ಸಾಲಯವನ್ನು ತೆರೆದಿದ್ದು, 5-6 ಗ್ರಾಮಗಳಿಗೆ ಸಮರ್ಪಕ ಪಶುವೈದ್ಯ ಸೇವೆಯನ್ನು ಒದಗಿಸಲಾಗಿದ್ದು, ರೈತರಿಗೆ ಯಾವುದೇ ತೊಂದರೆಯಾಗುತ್ತಿಲ್ಲ. |
| ಇ | ಹಾಗಿದ್ದಲ್ಲಿ, ಬಿದಲೂರು ಗ್ರಾಮದಲ್ಲಿ ಪಶು ಚಿಕಿತ್ಸಾಲಯವಾಗಲಿ, ಕೃತಕ ಗರ್ಭಧಾರಣೆ ಕೇಂದ್ರವಾಗಲಿ ಸ್ಥಾಪಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಪೂರ್ಣ ಮಾಹಿತಿ ನೀಡುವುದು ) | ಉದ್ಭವಿಸುವುದಿಲ್ಲ |

ಪಸಂಮೀ ಇ-304 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

# ಕರ್ನಾಟಕ ವಿಧಾನ ಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 490

2.ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ)

3.ಉತ್ತರಿಸುವ ದಿನಾಂಕ : 09.12.2020

4.ಉತ್ತರಿಸುವ ಸಚಿವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪ್ರಸ್ತುತ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ವಿವಿಧ ವೃಂದದ ಇಂಜಿನಿಯರ್ ಗಳಿಗೆ ಬಡ್ತಿ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ಪ್ರಸ್ತುತ ಅಂತಹ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಇಲಾಖೆಯಿಂದಲೇ ನೇರ ನೇಮಕಾತಿ ಹೊಂದಿರುವ ಒಟ್ಟು ಇಂಜಿನಿಯರ್ ಗಳ ಸಂಖ್ಯೆ ಎಷ್ಟು; (ವೃಂದವಾರು ಹುದ್ದೆಗಳ ಸಂಖ್ಯೆ ವಿವರ ನೀಡುವುದು) | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ನೇರ ನೇಮಕಾತಿ ಮೂಲಕ ಒಟ್ಟು 677 ಇಂಜಿನಿಯರ್ ಗಳು ನೇಮಕಾತಿ ಹೊಂದಿದ್ದು, ವಿವಿಧ ವೃಂದದ ಇಂಜಿನಿಯರ್ ಗಳ ವಿವರ ಕೆಳಕಂಡಂತಿದೆ:- |

| ಕ್ರ. ಸಂ. | ವೃಂದ | ಸಂಖ್ಯೆ |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 07 |
| 2. | ಸಹಾಯಕ ಇಂಜಿನಿಯರ್ | 205 |
| 3. | ಕಿರಿಯ ಇಂಜಿನಿಯರ್ | 465 |
| | ಒಟ್ಟು: | 677 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಅದರಲ್ಲಿ, ಈಗಾಗಲೇ ಎಷ್ಟು ಮಂದಿಗೆ ಬಡ್ತಿ ನೀಡಲಾಗಿದೆ; (ಪೂರ್ಣ ಮಾಹಿತಿ ನೀಡುವುದು) ಪ್ರಸ್ತುತ ಎಷ್ಟು ಮಂದಿಗೆ ಮತ್ತು ಯಾವ ಯಾವ ವೃಂದದವರಿಗೆ ಬಡ್ತಿ ನೀಡುವ ಪ್ರಸ್ತಾವನೆ ಇರುತ್ತದೆ; ಹಾಗಿದ್ದಲ್ಲಿ, ಬಡ್ತಿ ಪ್ರಕ್ರಿಯೆ ಯಾವ ಹಂತದಲ್ಲಿದೆ? (ಪೂರ್ಣ ಮಾಹಿತಿ ನೀಡುವುದು) | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ನೇರ ನೇಮಕಾತಿ ಹೊಂದಿರುವ ಇಂಜಿನಿಯರ್ ಗಳ ಪೈಕಿ ಅರ್ಹ 65 ಸಹಾಯಕ ಇಂಜಿನಿಯರ್ ಗಳಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಬಡ್ತಿ ನೀಡಲಾಗಿರುತ್ತದೆ. ಉಳಿದಂತೆ ಸಧ್ಯಕ್ಕೆ ಬಡ್ತಿ ನೀಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂಖ್ಯೆ ಗ್ರಾಅಪ 122 ಜಿಪಲ 2020

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ

ಗ್ರಾಮೀಣಾಭಿವೃದ್ಧಿ ಮತ್ತು

ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 493

ಸದಸ್ಯರ ಹೆಸರು : ಶ್ರೀ ಎಸ್.ಎನ್.ನಾರಾಯಣ ಸ್ವಾಮಿ ಕೆ.ಎಂ. (ಬಂಗಾರಪೇಟೆ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬಂಗಾರಪೇಟೆ ವಿಧಾನಸಭಾ ಕ್ಷೇತ್ರದ ಬೂದಿಕೋಟೆ ಹೋಬಳಿಯ ಕೇಂದ್ರ ಸ್ಥಾನದಲ್ಲಿ ಆರೋಗ್ಯ ಇಲಾಖೆಯ ಅನುಪಯುಕ್ತ ಸ್ಥಳವನ್ನು ಇಲಾಖೆಯ ವಶಕ್ಕೆ ಪಡೆದು ಸದರಿ ಸ್ಥಳದಲ್ಲಿ ಸಾರ್ವಜನಿಕ ಬಸ್ ನಿಲ್ದಾಣ ಮತ್ತು ವಾಣಿಜ್ಯ ಸಂಕೀರ್ಣ ನಿರ್ಮಾಣ ಮಾಡಿ ಸಾರ್ವಜನಿಕರಿಗೆ ಸೌಲಭ್ಯವನ್ನು ಕಲ್ಪಿಸಲು ಸರ್ಕಾರ ಉದ್ದೇಶಿಸಿದೆಯೇ; | ಬೂದಿಕೋಟೆ ಗ್ರಾಮದಲ್ಲಿ ಬಸ್ ನಿಲ್ದಾಣ ನಿರ್ಮಿಸಲು ಬೂದಿಕೋಟೆಯ ಹಳೆಯ ಸರ್ಕಾರಿ ಆಸ್ಪತ್ರೆಯ ಸರ್ವೆ ನಂಬರ್ 656ರ 147*110 ಅಡಿಗಳ (15.00 ಗುಂಟೆ) ನಿವೇಶನ ಉಪಯೋಗಿಸಿಕೊಳ್ಳುವಂತೆ ಪ್ರಸ್ತಾವನೆ ಬಂದಿರುತ್ತದೆ. ಕ.ರಾ.ರ.ಸಾ.ನಿಗಮವು ಬಸ್ ನಿಲ್ದಾಣ ನಿರ್ಮಾಣ ಮಾಡಲು ಹೊರಡಿಸಿರುವ ಸುತ್ತೋಲೆ ಸಂಖ್ಯೆ: 01/2015-16 ದಿನಾಂಕ: 06.06.2015ರ ಪ್ರಕಾರ, ಹೋಬಳಿ ಕೇಂದ್ರದಲ್ಲಿ ಕನಿಷ್ಠ 01.00 ಎಕರೆ ಜಮೀನು ಅವಶ್ಯವಿರುವ ಕಾರಣ ಹಳೆಯ ಸರ್ಕಾರಿ ಆಸ್ಪತ್ರೆಯ 15.00 ಗುಂಟೆಯ ನಿವೇಶನವು ಸಾಕಾಗುವುದಿಲ್ಲ.<br><br>ಈ ಹಿನ್ನೆಲೆಯಲ್ಲಿ ಸರ್ಕಾರಿ ಆಸ್ಪತ್ರೆಯ ನಿವೇಶನಕ್ಕೆ ಹೊಂದಿಕೊಂಡಂತೆ 25.00 ಗುಂಟೆ ವಿಸ್ತೀರ್ಣದ ಸೂಕ್ತ ನಿವೇಶನವು ಲಭ್ಯವಾದಲ್ಲಿ ಸುತ್ತೋಲೆ ಸಂಖ್ಯೆ: 01/2015-16 ದಿನಾಂಕ: 06.06.2015ರ ಪ್ರಕಾರ, ಸಾರಿಗೆ ಅವಶ್ಯಕತೆ ಹಾಗೂ ಆರ್ಥಿಕ ಲಭ್ಯತೆಯನ್ನು ಆಧರಿಸಿ ಸೂಕ್ತ ಕ್ರಮ ಜರುಗಿಸಲಾಗುವುದು. |
| ಆ. | ಹಾಗಿದ್ದಲ್ಲಿ ಇಲಾಖೆಗೆ ಆದಾಯ ತರುವಂತಹ ಪ್ರಸ್ತಾವನೆಯು ಆರೋಗ್ಯ ಇಲಾಖೆಯಿಂದ ಪ್ರಸ್ತಾಪಿಸುವ ವಿಚಾರ ಯಾವ ಹಂತದಲ್ಲಿದೆ; ಈ ಬಗ್ಗೆ ಸರ್ಕಾರದ ನಿಲುವೇನು? (ವಿವರ ಒದಗಿಸುವುದು) | ಸರ್ಕಾರಿ ಆಸ್ಪತ್ರೆಯ ನಿವೇಶನಕ್ಕೆ ಹೊಂದಿಕೊಂಡಂತೆ 25.00 ಗುಂಟೆ ವಿಸ್ತೀರ್ಣದ ಸೂಕ್ತ ನಿವೇಶನ ಅಥವಾ ಪರ್ಯಾಯ ಸ್ಥಳದಲ್ಲಿ ಒಟ್ಟು 1.00 ಎಕರೆ ನಿವೇಶನವನ್ನು ಮಂಜೂರು ಮಾಡುವಂತೆ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಇವರನ್ನು ಕೋರಲಾಗಿರುತ್ತದೆ. |

ಸಂಖ್ಯೆ: ಟಿಡಿ 221 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 500

ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ.(ಅರಸೀಕೆರೆ)

ಉತ್ತರಿಸಬೇಕಾದ ದಿನಾಂಕ : 09/12/2020

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪ್ರಸಕ್ತ ಸಾಲಿನಲ್ಲಿ ಅಲ್ಪಸಂಖ್ಯಾತರ ಕಾಲೋನಿಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಅಭಿವೃದ್ಧಿ ಯೋಜನೆ ಜಾರಿಯಲ್ಲಿದೆಯೇ: | ಪ್ರಸಕ್ತ ಸಾಲಿನಲ್ಲಿ ಅಲ್ಪಸಂಖ್ಯಾತರ ಕಾಲೋನಿಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಅಭಿವೃದ್ಧಿ ಯೋಜನೆಯು ಜಾರಿಯಲ್ಲಿರುವುದಿಲ್ಲ.<br><br>ಆದರೆ, ಪ್ರಸಕ್ತ ಸಾಲಿನ ಆಯವ್ಯಯ ಘೋಷಣೆ ಕಂಡಿಕೆ-91 ರಲ್ಲಿ ಬೆಂಗಳೂರು ಸೇರಿದಂತೆ ರಾಜ್ಯದ 10 ಮಹಾನಗರ ಪಾಲಿಕೆಗಳಲ್ಲಿ ಅಧಿಸೂಚಿತವಲ್ಲದ ಹಲವಾರು ಕೊಳಗೇರಿ ಪ್ರದೇಶಗಳಲ್ಲಿ ಅಲ್ಪಸಂಖ್ಯಾತರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವ ಕೊಳಚೆ ಪ್ರದೇಶಗಳನ್ನು ಅಭಿವೃದ್ಧಿಪಡಿಸುವುದು ಎಂದು ಮಾನ್ಯ ಮುಖ್ಯ ಮಂತ್ರಿಗಳು ಘೋಷಣೆ ಮಾಡಿರುತ್ತಾರೆ. |
| ಆ | ಹಾಗಿದ್ದಲ್ಲಿ, 2020-21 ನೇ ಸಾಲಿನ ಆಯವ್ಯಯದಲ್ಲಿ ಈ ಯೋಜನೆಗೆ ಒದಗಿಸಿರುವ ಅನುದಾನದ ಮೊತ್ತವೆಷ್ಟು: ಯಾವ ಯಾವ ತಾಲ್ಲೂಕುಗಳಿಗೆ ಎಷ್ಟೆಷ್ಟು ಅನುದಾನ ನೀಡಲಾಗಿದೆ ( ಸಂಪೂರ್ಣ ಮಾಹಿತಿ ನೀಡುವುದು)? | ಅನ್ವಯಿಸುವುದಿಲ್ಲ |

ಸಂಖ್ಯೆ: MWD 152 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 502

ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಅರಸೀಕೆರೆ ನಗರದಲ್ಲಿ ಸಾರಿಗೆ ಬಸ್ ನಿಲ್ದಾಣ ವಿಸ್ತರಣೆ ಮಾಡಲು ಪಶು ಸಂಗೋಪನೆ ಇಲಾಖೆಯ ನಿವೇಶನ ಪ್ರದೇಶವನ್ನು ಸ್ವಾಧೀನಕ್ಕೆ ಪಡೆದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಬಂದಿದ್ದಲ್ಲಿ, ಸಾರಿಗೆ ಬಸ್ ನಿಲ್ದಾಣ ವಿಸ್ತರಣೆ ಯಾವಾಗ ಮಾಡಲಾಗುವುದು; ಈ ಕಾಮಗಾರಿಗೆ ಎಷ್ಟು ಅನುದಾನ ನೀಡಲಾಗಿದೆ? | ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಕ.ರಾ.ರ.ಸಾ.ನಿಗಮದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರದ ಕಾರಣ, ಹೊಸದಾಗಿ ಯಾವುದೇ ಅಭಿವೃದ್ಧಿ ಕಾಮಗಾರಿ ಕೆಲಸಗಳನ್ನು ನಿಗಮದ ವತಿಯಿಂದ ಕೈಗೊಳ್ಳುತ್ತಿಲ್ಲ.<br>ಮುಂದಿನ ದಿನಗಳಲ್ಲಿ ನಿಗಮದ ಆರ್ಥಿಕ ಪರಿಸ್ಥಿತಿಯು ಸುಧಾರಿಸಿದ ನಂತರ, ಕಾಮಗಾರಿಯನ್ನು ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ: ಟಿಡಿ 223 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಶ್ರೀ ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ) |
| ಸದಸ್ಯರ ಹೆಸರು | 508 |
| ಉತ್ತರಿಸಬೇಕಾದ ದಿನಾಂಕ | 9.12.2020 |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| 1 | ರಾಜ್ಯದಲ್ಲಿ ರೈತರು ಬೆಳೆದ ಬೆಳೆಯನ್ನು ಗ್ರಾಮಕ್ಕೆ ಅಥವಾ ಮಾರುಕಟ್ಟೆಗೆ ತಲುಪಿಸಲು ಅನುಕೂಲವಾಗುವಂತೆ ಜಮೀನು ಸಂಪರ್ಕ ರಸ್ತೆಗಳನ್ನು ಸುಧಾರಣೆ ಮಾಡುವಂತೆ ಸರ್ಕಾರಕ್ಕೆ ಒತ್ತಾಯಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ? | ಸರ್ಕಾರದ ಗಮನಕ್ಕೆ ಬಂದಿದೆ. |
| 2 | ಹಾಗಿದ್ದಲ್ಲಿ ರೈತರ ಅನುಕೂಲಕ್ಕಾಗಿ ಜಮೀನು ಸಂಪರ್ಕ ರಸ್ತೆಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಅಭಿವೃದ್ಧಿಪಡಿಸಲು ಕೈಗೊಂಡಿರುವ ಕ್ರಮಗಳೇನು? | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ವತಿಯಿಂದ ಜನ ಸಂಪರ್ಕ ರಸ್ತೆಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, ಇದುವರೆವಿಗೂ ಸುಮಾರು 3500 ಕಿ.ಮೀ. ರಸ್ತೆಗಳನ್ನು ಅಭಿವೃದ್ಧಿಪಡಿಸಲಾಗಿದೆ. |
| 3 | ಇದುವರೆಗೂ ಎಷ್ಟು ಕಿ.ಮೀಟರ್ ರಸ್ತೆಗಳನ್ನು ಅಭಿವೃದ್ಧಿಪಡಿಸಲಾಗಿದೆ? | |
| 4 | ಇದಕ್ಕಾಗಿ ಅನುದಾನವನ್ನು ಯಾವ ಲೆಕ್ಕ ಶೀರ್ಷಿಕೆಯಿಂದ ಒದಗಿಸಲಾಗುತ್ತಿದೆ? | ಇದಕ್ಕಾಗಿ ಪ್ರತ್ಯೇಕ ಯೋಜನೆ/ ಲೆಕ್ಕ ಶೀರ್ಷಿಕೆ ಇರುವುದಿಲ್ಲ.<br><br>ಆದರೆ, ಮಹಾತ್ಮಗಾಂಧಿ ನರೇಗಾ ಯೋಜನೆಯಡಿ ಗ್ರಾಮೀಣ ಭಾಗದ ರೈತರ ಹೊಲಗಳಿಗೆ, ಸರ್ವಋತು ರಸ್ತೆಗಳ ನಿರ್ಮಾಣದ ಸದುದ್ದೇಶದಿಂದ ಗ್ರಾಮ ಪಂಚಾಯತ್‌ಗಳಿಂದ ಅನುಷ್ಠಾನಗೊಳಿಸುವ ನಮ್ಮ ಹೊಲ ನಮ್ಮ ರಸ್ತೆ ಕಾಮಗಾರಿಯು ಗ್ರಾಮ ಪಂಚಾಯತ್ ವಾರ್ಷಿಕ ಕ್ರಿಯಾ ಯೋಜನೆಯ ಒಂದು ಅನುಮೋದಿತ ಕಾಮಗಾರಿ/ ಚಟುವಟಿಕೆ ಆಗಿರುತ್ತದೆ. ಇದಕ್ಕಾಗಿ ಪ್ರತ್ಯೇಕ ಯೋಜನೆ ಮತ್ತು ಅನುದಾನ ಒದಗಿಸಿರುವುದಿಲ್ಲ. |
| 5 | ರಾಜ್ಯದಲ್ಲಿ ಜಮೀನು ಸಂಪರ್ಕ ರಸ್ತೆಗಳನ್ನು ಅಭಿವೃದ್ಧಿಗೊಳಿಸಲು ಸರ್ಕಾರ ಕೈಗೊಳ್ಳಲಾಗುವ ಕ್ರಮಗಳಾವುವು? | |

ಕಡತ ಸಂಖ್ಯೆ: ಗ್ರಾಅಪ:08/26:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 603 |
| ಸದಸ್ಯರ ಹೆಸರು | : | ಶ್ರೀ ರಾಮದಾಸ್ ಎಸ್.ಎ. (ಕೃಷ್ಣರಾಜ) |
| ಉತ್ತರಿಸಬೇಕಾದ ದಿನಾಂಕ | : | 09-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯದಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವ್ಯಾಪ್ತಿಯೊಳಗೆ ಬರುವ ರಾಜ್ಯ ವಕ್ಫ್ ಮಂಡಳಿಯಲ್ಲಿ ನಡೆದಿರುವ ಅಕ್ರಮಗಳು ಗಮನಕ್ಕೆ ಬಂದಿದೆಯೇ; ಬಂದ್ದಿದಲ್ಲಿ ಈ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ವಕ್ಫ್ ಆಸ್ತಿಗಳ ಅತಿಕ್ರಮಣ, ಪರಭಾರೆ, ಮಾರಾಟ, ಒತ್ತುವರಿ ಮತ್ತು ಹಣಕಾಸಿನ ದುರುಪಯೋಗದ ಬಗ್ಗೆ ಗಮನಕ್ಕೆ ಬಂದಿದೆ ಹಾಗೂ ಇದರ ಬಗ್ಗೆ ಕಲಂ 52 ಮತ್ತು 54 ಕೆ.ಪಿ.ಪಿ ಕಾಯ್ದೆ ಮತ್ತು ವಿವಿಧ ನ್ಯಾಯಾಲಯಗಳಲ್ಲಿ ಪ್ರಕರಣಗಳು ನಡೆಸಿ ಕ್ರಮಕೈಗೊಳ್ಳಲಾಗುತ್ತಿದೆ. |
| ಆ. | ರಾಜ್ಯ ವಕ್ಫ್ ಮಂಡಳಿಯಲ್ಲಿ ಆಗಿಂದಾಗ್ಗೆ ಅಕ್ರಮಗಳು ನಡೆಯುತ್ತಿರುವುದರಿಂದ ರಾಜ್ಯ ವಕ್ಫ್ ಮಂಡಳಿಯನ್ನು ಅಮಾನತ್ತಿನಲ್ಲಿಡುವ ಉದ್ದೇಶ ಸರ್ಕಾರಕ್ಕೆ ಇದೆಯೇ; | ಇಲ್ಲ |
| ಇ. | ಈ ಮಂಡಳಿಯಲ್ಲಿ ನಡೆದಿರುವ ಅಕ್ರಮಗಳ ಕುರಿತು ಸಿ.ಬಿ.ಐ. ನಿಂದ ತನಿಖೆ ನಡೆಸುವ ಕುರಿತು ಸರ್ಕಾರದ ನಿಲುವೇನು; | ಕೋರಿಕೆಗಳು ಬಂದಲ್ಲಿ ಪರಿಶೀಲಿಸಲಾಗುವುದು. |
| ಈ. | ಮೈಸೂರಿನಲ್ಲಿ ವಕ್ಫ್ ಮಂಡಳಿಯ ಮಜ್ಲೀಸ್-ಇ-ರಿಫಾಹುಲ್ ಮುಸ್ಲಿಮೀನ್ ಬಾಲಕರು ಮತ್ತು ಬಾಲಕಿಯರ ಅನಾಥಾಶ್ರಮಕ್ಕೆ ಸಂಬಂಧಪಟ್ಟ ಅಕ್ರಮಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಮೈಸೂರಿನ ಮಜ್ಲೀಸ್-ಇ-ರಿಫಾಹುಲ್ ಮುಸ್ಲಿಮೀನ್ ಬಾಲಕರು ಮತ್ತು ಬಾಲಕಿಯರ ಅನಾಥಾಶ್ರಮವು ಸರ್ಕಾರದ ರಾಜ್ಯಪತ್ರ ಸಂಖ್ಯೆ :ಎಂ.ಡಬ್ಲ್ಯುಬಿ/19(2)/1965, ದಿನಾಂಕ:01.04.1965 ರಲ್ಲಿ ಅಧಿಸೂಚನೆಗೊಂಡ ವಕ್ಫ್ ಸಂಸ್ಥೆಯಾಗಿರುತ್ತದೆ, ಹಾಗೂ ಸದರಿ ವಕ್ಫ್ ಸಂಸ್ಥೆಯಲ್ಲಿ ಯಾವುದೇ ಅಕ್ರಮವಾಗಿರುವುದಿಲ್ಲವೆಂದು ವರದಿಯಾಗಿರುತ್ತದೆ. |
| ಉ. | ಹಾಗಿದ್ದಲ್ಲಿ, ಅಕ್ರಮಗಳ ಕುರಿತು ಸರ್ಕಾರವು ಉನ್ನತ ಮಟ್ಟದ ತನಿಖೆಗೆ ಆದೇಶಿಸಿ ತಪ್ಪಿತಸ್ಥರನ್ನು ಶಿಕ್ಷಿಸುವ ಉದ್ದೇಶವನ್ನು ಹೊಂದಿದೆಯೇ? | ಉದ್ಭವಿಸುವುದಿಲ್ಲ. |

**ಸಂಖ್ಯೆ: MWD 156 LMQ 2020**

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು
ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಅಜಯ್ ಧರ್ಮ ಸಿಂಗ್ ಡಾ: (ಜೇವರ್ಗಿ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 605

ಉತ್ತರಿಸಬೇಕಾದ ದಿನಾಂಕ : 09.12.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿ ಗೋಹತ್ಯೆಯನ್ನು ನಿಷೇಧಿಸುವ ಆಲೋಚನೆಯನ್ನು ಸರ್ಕಾರ ಹೊಂದಿದೆಯೇ (ವಿವರ ನೀಡುವುದು) | -ಹೌದು- |
| ಆ | ಹಾಗಿದ್ದಲ್ಲಿ, ಗೋಹತ್ಯೆ ನಿಷೇಧಿಸುವ ಮುನ್ನ ಸದರಿ ಉದ್ದಿಮೆಯನ್ನು ನಂಬಿರುವ ಕುಟುಂಬಗಳಿಗೆ ಪರ್ಯಾಯ ಉದ್ಯೋಗಗಳನ್ನು ಒದಗಿಸಲು ಕೈಗೊಳ್ಳಲಿರುವ ಕ್ರಮಗಳೇನು (ಮಾಹಿತಿ ನೀಡುವುದು)? | ಗೋಹತ್ಯೆ ನಿಷೇಧ ಮಸೂದೆ ಜಾರಿಯಾದಲ್ಲಿ ಸದರಿ ಉದ್ದಿಮೆಯನ್ನು ನಂಬಿರುವ ಕುಟುಂಬಗಳಿಗೆ ಪರ್ಯಾಯ ಉದ್ಯೋಗಗಳನ್ನು ಒದಗಿಸುವ ಕುರಿತು ಸರ್ಕಾರದ ಮಟ್ಟದಲ್ಲಿ ಪರಿಶೀಲನೆಯ ಹಂತದಲ್ಲಿದೆ. |

ಪಸಂಮೀ ಇ-310 ಸಲೆವಿ 2020

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

<u>ಕರ್ನಾಟಕ ವಿಧಾನ ಸಭೆ</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 609 |
| ಸದಸ್ಯರ ಹೆಸರು | ಶ್ರೀ ಅಜಯ್ ಧರ್ಮಸಿಂಗ್ ಡಾ॥ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | 2020-21 ನೇ ಸಾಲಿನಲ್ಲಿ ಸುರಿದ ಭಾರೀ ಮಳೆಯಿಂದ ಹಾಗೂ ನದಿಯ ಪ್ರವಾಹದಿಂದ ಹಾನಿಗೀಡಾದ ರಸ್ತೆಗಳ ದುರಸ್ಥಿಗಾಗಿ ಬಿಡುಗಡೆಗೊಳಿಸಲಾಗಿರುವ ಅನುದಾನವೆಷ್ಟು; (ಜೇವರ್ಗಿ ಹಾಗೂ ಯಡ್ರಾಮಿ ತಾಲ್ಲೂಕುವಾರು ವಿವರ ಒದಗಿಸುವುದು) | • ಪ್ರಸ್ತುತ ಸಾಲಿನಲ್ಲಿ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳ ದುರಸ್ತಿಗಾಗಿ ಯಾವುದೇ ಅನುದಾನವನ್ನು ಬಿಡುಗಡೆ ಮಾಡಿರುವುದಿಲ್ಲ. |
| ಆ. | ಸದರಿ ಅನುದಾನದಲ್ಲಿ ಎಷ್ಟು ವಿಸ್ತೀರ್ಣ ಹಾಗೂ ಯಾವ ಯಾವ ರಸ್ತೆಗಳ ದುರಸ್ಥಿ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ; | • ಪ್ರಸ್ತುತ ಸಾಲಿನಲ್ಲಿ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳ ವಿವರಗಳನ್ನು ಮುಖ್ಯ ಇಂಜಿನಿಯರ್, ಪಿ.ಆರ್.ಇ.ಡಿ. ಹಾಗೂ ಮುಖ್ಯ ಕಾರ್ಯಾಚರಣೆ ಅಧಿಕಾರಿಗಳು, ಕೆ.ಆರ್.ಆರ್.ಡಿ.ಎ ರವರುಗಳಿಂದ ಪಡೆದು ಕ್ರೋಢೀಕರಿಸಿ ರೂ.110531.61ಲಕ್ಷಗಳ ಅನುದಾನಕ್ಕೆ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ರವರಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಇದರಲ್ಲಿ ಯಡ್ರಾಮಿ, ಜೇವರ್ಗಿಯೂ ಒಳಗೊಂಡಂತೆ ಕಲಬುರ್ಗಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಗೂ ರೂ.5634.85ಲಕ್ಷಗಳ ಅನುದಾನಕ್ಕೆ ಬೇಡಿಕೆ ಸಲ್ಲಿಸಲಾಗಿರುತ್ತದೆ. |

ಕಡತ ಸಂಖ್ಯೆ: ಗ್ರಾಅಪ:08/16:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಃ | 610 |
| ಸದಸ್ಯರ ಹೆಸರು | ಃ | ಶ್ರೀ.ಲಿಂಗೇಶ.ಕೆ.ಎಸ್ (ಬೇಲೂರು) |
| ಉತ್ತರಿಸುವ ದಿನಾಂಕ | ಃ | 09.12.2020 |
| ಉತ್ತರಿಸುವ ಸಚಿವರು | ಃ | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಪ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೇಲೂರು ಕ್ಷೇತ್ರದ ವ್ಯಾಪ್ತಿಯಲ್ಲಿರುವ ಪಶು ಆಸ್ಪತ್ರೆಗಳೆಷ್ಟು; | ಬೇಲೂರು ಕ್ಷೇತ್ರದ ವ್ಯಾಪ್ತಿಯಲ್ಲಿರುವ ಪಶು ವೈದ್ಯ ಸಂಸ್ಥೆಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ. |
| ಆ) | ಕ್ಷೇತ್ರದ ವ್ಯಾಪ್ತಿಯಲ್ಲಿನ ಪಶುಚಿಕಿತ್ಸಾ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ) | ಬಂದಿದ್ದಲ್ಲಿ, ಯಾವಾಗ ಮೇಲ್ದರ್ಜೆಗೇರಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 278 ಪಸಸೇ 2016, ದಿನಾಂಕ: 09.10.2017 ಅನ್ವಯ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು 2017-18 ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಹಂತ ಹಂತವಾಗಿ ಮೇಲ್ದರ್ಜೆಗೇರಿಸಲು ಕಾರ್ಯಕ್ರಮ ಹಮ್ಮಿಕೊಳ್ಳಲಾಗಿರುತ್ತದೆ. 2017-18 ನೇ ಸಾಲಿನಲ್ಲಿ ಈಗಾಗಲೇ 302 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿರುತ್ತದೆ. ಉಳಿದಂತೆ 2018-19 ನೇ ಸಾಲಿನಲ್ಲಿ 400 ಹಾಗೂ 2019-20 ನೇ ಸಾಲಿನಲ್ಲಿ 400 ಒಟ್ಟು 800 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತಾಲಯಗಳನ್ನಾಗಿ ಮೇಲ್ದರ್ಜೆಗೇರಿಸಬೇಕಾಗಿದ್ದು, ಈ ಸಂಬಂಧ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿರುತ್ತದೆ. ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಅದ್ಯತೆ ಮೇರೆಗೆ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮ ವಹಿಸಲಾಗುವುದು. |

| ಕ್ರ.ಸಂ | ಸಂಸ್ಥೆಗಳು | ಮಂಜೂರಾತಿ |
|---|---|---|
| 1. | ಪಶು ಆಸ್ಪತ್ರೆ | 04 |
| 2. | ಪಶುಚಿಕಿತ್ಸಾಲಯ | 13 |
| 3. | ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ | 08 |
| 4. | ಸಂಚಾರಿ ಪಶುಚಿಕಿತ್ಸಾಲಯ | 01 |
| | ಒಟ್ಟು | 26 |

ಸಂ: ಪಸಂಮೀ ಇ-186 ಪಸಸೇ 2020

(ಪ್ರಭು. ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 611

ಸದಸ್ಯರ ಹೆಸರು : ಶ್ರೀ ಲಿಂಗೇಶ ಕೆ.ಎಸ್ (ಬೇಲೂರು

ಉತ್ತರಿಸಬೇಕಾದ ದಿನಾಂಕ : 09/12/2020

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಬೇಲೂರು ಕ್ಷೇತ್ರದ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಅಲ್ಪಸಂಖ್ಯಾತರ ಜನಸಂಖ್ಯೆ ಎಷ್ಟು: | 2011ನೇ ಸಾಲಿನ ಜನಗಣತಿಯ ಪ್ರಕಾರ ಬೇಲೂರು ಕ್ಷೇತ್ರದ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಅಲ್ಪಸಂಖ್ಯಾತರ ಜನಸಂಖ್ಯೆ ಸುಮಾರು 16,301 ಇರುತ್ತದೆ. |
| ಆ | ಕ್ಷೇತ್ರದ ವ್ಯಾಪ್ತಿಯಲ್ಲಿನ ಅಲ್ಪಸಂಖ್ಯಾತರ ಕಾಲೋನಿಗಳಿಗೆ ಮೂಲಭೂತ ಸೌಲಭ್ಯ ಒದಗಿಸಲು ಅನುದಾನ ಮಂಜೂರಾತಿಗಾಗಿ ಸಲ್ಲಿಸಿರುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯ; | ಹೌದು |
| ಇ | ಬಂದಿದ್ದಲ್ಲಿ, ಯಾವಾಗ ಅನುದಾನ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | (see table below) |

| ಕ್ರಮ ಸಂಖ್ಯೆ | ವರ್ಷ | ಮಂಜೂರು ಮಾಡಿದ ಅನುದಾನ (ರೂ.ಲಕ್ಷಗಳಲ್ಲಿ) | ಬಿಡುಗಡೆ ಮಾಡಿದ ಅನುದಾನ (ರೂ.ಲಕ್ಷಗಳಲ್ಲಿ) | ಖರ್ಚಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|---|
| 1 | 2017-18 | 150.00 | 150.00 | 150.00 |
| 2 | 2018-19 | 525.00 | 525.00 | 525.00 |
| | ಒಟ್ಟು | 675.00 | 675.00 | 675.00 |

2019-20 & 2020-21ನೇ ಸಾಲಿನಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಅಲ್ಪಸಂಖ್ಯಾತರ ಅಭಿವೃದ್ಧಿ ಯೋಜನೆಯಡಿ ಅಲ್ಪಸಂಖ್ಯಾತರು ಹೆಚ್ಚಾಗಿ ವಾಸಿಸುವ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕಾಮಗಾರಿಗೆ ಆಯವ್ಯಯದಲ್ಲಿಯಾವುದೇ ಅನುದಾನ ನಿಗದಿಪಡಿಸಿರುವುದಿಲ್ಲ.

ಸಂಖ್ಯೆ: MWD 163 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರ ಹೆಸರು | : ಶ್ರೀ ನಾಗೇಂದ್ರ ಎಲ್. (ಚಾಮರಾಜ) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : 618 |
| ಉತ್ತರಿಸಬೇಕಾದ ದಿನಾಂಕ | : 09.12.2020. |
| ಉತ್ತರಿಸಬೇಕಾದ ಸಚಿವರು | : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು. |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮೈಸೂರು ನಗರದಲ್ಲಿ ಹೊಸದಾಗಿ ನಿರ್ಮಾಣಗೊಂಡಿರುವ ಪಾಲಿಕ್ಲಿನಿಕ್ ಕಟ್ಟಡವನ್ನು ಈವರೆಗೆ ಉದ್ಘಾಟನೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾರಣವೇನು; (ವಿವರ ನೀಡುವುದು) | ಮೈಸೂರು ನಗರದಲ್ಲಿ ಹೊಸದಾಗಿ ನಿರ್ಮಾಣಗೊಳ್ಳುತ್ತಿರುವ ಪಾಲಿಕ್ಲಿನಿಕ್ ಕಟ್ಟಡವು ಇನ್ನು ಪೂರ್ಣಪ್ರಮಾಣದಲ್ಲಿ ಸಿದ್ಧಗೊಂಡಿರುವುದಿಲ್ಲವಾದ್ದರಿಂದ ಇಲಾಖೆಗೆ ಹಸ್ತಾಂತರವಾಗಿರುವುದಿಲ್ಲ. ಆದ್ದರಿಂದ ಉದ್ಘಾಟನೆ ಮಾಡಿರುವುದಿಲ್ಲ. |
| ಆ | ಸದರಿ ಕಟ್ಟಡವನ್ನು ಯಾವಾಗ ಕಾರ್ಯನಿರ್ವಹಣೆಗಾಗಿ ಪ್ರಾರಂಭಿಸಲಾಗುವುದು; ಕಟ್ಟಡದ ಕಾಮಗಾರಿಗಳು ಪೂರ್ಣಗೊಂಡಿದೆಯೇ; ಪೂರ್ಣಗೊಳ್ಳದಿದ್ದಲ್ಲಿ, ಕಾರಣವೇನು? (ವಿವರ ಒದಗಿಸುವುದು) | ಪಾಲಿಕ್ಲಿನಿಕ್ ಕಟ್ಟಡದ ಕಾಮಗಾರಿ ಬಹುತೇಕ ಪೂರ್ಣಗೊಂಡಿದ್ದು, ವಿದ್ಯುತ್ ಸಂಪರ್ಕ ಅಳವಡಿಸಲು ಕ್ರಮವಹಿಸಲಾಗಿದೆ. ಸದರಿ ಕಟ್ಟಡ ಕಾಮಗಾರಿ ಪೂರ್ಣಗೊಂಡ ನಂತರ ಕಾರ್ಯನಿರ್ವಹಿಸಲು ಪ್ರಾರಂಭಿಸಲಾಗುವುದು. |

ಪಸಂಮೀ ಇ-312 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು.

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 619 |
| ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ನಾಗೇಂದ್ರ ಎಲ್ (ಚಾಮರಾಜ) |
| ಉತ್ತರಿಸುವ ದಿನಾಂಕ | : | 9-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು ಎಷ್ಟು ಅಂಗನವಾಡಿ ಕೇಂದ್ರಗಳಿವೆ; ಅಂಗನವಾಡಿ ಕೇಂದ್ರಗಳಿಗೆ ಸ್ವಂತ ಕಟ್ಟಡವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮರಾಜ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು 50 ಅಂಗನವಾಡಿ ಕೇಂದ್ರಗಳಿವೆ.<br>ಈ ಎಲ್ಲಾ ಅಂಗನವಾಡಿ ಕೇಂದ್ರಗಳಿಗೆ ಸ್ವಂತ ಕಟ್ಟಡಗಳಿರುವುದಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಸ್ವಂತ ಕಟ್ಟಡ ನಿರ್ಮಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿರುವ ಅಂಗನವಾಡಿ ಕೇಂದ್ರಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ ಮೈಸೂರು ಮಹಾನಗರ ಪಾಲಿಕೆ ಹಾಗೂ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವನ್ನು ನಿವೇಶನ ಒದಗಿಸುವಂತೆ ಕೋರಲಾಗಿದೆ. ಇದಲ್ಲದೆ, ಈ ಬಗ್ಗೆ ಸಂಬಂಧಪಟ್ಟ ಪಾಲಿಕೆ ಸದಸ್ಯರ ಜೊತೆ ಸಹ ಚರ್ಚಿಸಲಾಗಿದೆ. ನಿವೇಶನ ಲಭ್ಯತೆ ಮತ್ತು ಅನುದಾನ ಲಭ್ಯತೆ ಆಧಾರದ ಮೇಲೆ ಸ್ವಂತ ಕಟ್ಟಡ ನಿರ್ಮಿಸಲಾಗುವುದು. |
| ಇ) | ಶಿಥಿಲಾವಸ್ಥೆಯಲ್ಲಿರುವ ಅಂಗನವಾಡಿ ಕೇಂದ್ರಗಳೆಷ್ಟು; ಅಂಗನವಾಡಿ ಕೇಂದ್ರಗಳ ದುರಸ್ತಿಗೆ ಸರ್ಕಾರ ಕ್ರಮ ಕೇಂದ್ರಗಳ ದುರಸ್ತಿಗೆ ಸರ್ಕಾರ ಕ್ರಮ ಕೈಗೊಂಡಿದೆಯೇ; (ವಿವರ ಒದಗಿಸುವುದು) | ಚಾಮರಾಜ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪ್ರಸ್ತುತ ಶಿಥಿಲಾವಸ್ಥೆಯಲ್ಲಿರುವ ಅಂಗನವಾಡಿ ಕೇಂದ್ರಗಳು ಯಾವುದೂ ಇರುವುದಿಲ್ಲ. |
| ಈ) | ಪ್ರಸ್ತುತ ಇರುವ ಅಂಗನವಾಡಿ ಮೇಲ್ವಿಚಾರಕಿಯರ/ ಸಹಾಯಕಿಯರ ಹುದ್ದೆಗಳ ವಿವರ ಒದಗಿಸುವುದು. ಖಾಲಿ ಇರುವ ಹುದ್ದೆಗಳನ್ನು ತುಂಬಲು ಸರ್ಕಾರ ತೆಗೆದುಕೊಂಡ ಕ್ರಮಗಳಾವುವು? | ಚಾಮರಾಜ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಅಂಗನವಾಡಿ ಕೇಂದ್ರಗಳಿಗೆ ಮಂಜೂರಾಗಿರುವ ಹುದ್ದೆಗಳ ವಿವರ ಕೆಳಗಿನಂತಿವೆ:<br>ಮೇಲ್ವಿಚಾರಕಿಯರು - 02<br>ಕಾರ್ಯಕರ್ತೆಯರು - 50<br>ಸಹಾಯಕಿಯರು - 46<br>ಖಾಲಿ ಇರುವ 04 ಸಹಾಯಕಿಯರ ಹುದ್ದೆಗಳಿಗೆ ಆನ್ ಲೈನ್ ಮೂಲಕ ಅರ್ಜಿ ಕರೆಯಲಾಗಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು

ಸಂ: ಮಮಇ 216 ಐಸಿಡಿ 2020

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ನಾಗೇಂದ್ರ ಎಲ್. (ಚಾಮರಾಜ) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 620 |
| ಉತ್ತರಿಸಬೇಕಾದ ದಿನಾಂಕ | : | 09.12.2020. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು. |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಚಾಮರಾಜ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವಂತಹ ಕುಂಬಾರಕೊಪ್ಪಲಿನ ಪಶು ಆಸ್ಪತ್ರೆಯು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದಿಯೇ; ಬಂದಿದ್ದಲ್ಲಿ, ಕೈಗೊಂಡಿರುವ ಕ್ರಮಗಳೇನು; | ಬಂದಿದೆ. ಜಿಲ್ಲಾ ಪಂಚಾಯತ್ ಅನುದಾನದಲ್ಲಿ ದುರಸ್ಥಿಗೊಳಿಸಲು 2021-22ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸೇರಿಸಲು ಕ್ರಮವಹಿಸಲಾಗುವುದು. |
| ಆ | ಈ ಪಶು ಆಸ್ಪತ್ರೆಯ ಕಟ್ಟಡವನ್ನು ಅಭಿವೃದ್ಧಿಗೊಳಿಸಲು ಕಳೆದ 3 ವರ್ಷಗಳಲ್ಲಿ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ? (ವಿವರ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಕಟ್ಟಡದ ದುರಸ್ಥಿ ಸಂಬಂಧ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. |

ಪಸಂಮೀ ಇ-311 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 622

ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 09/12/2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕೊಪ್ಪಳ ಜಿಲ್ಲೆಯಲ್ಲಿ ಪ್ರಸಕ್ತ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದಾಗಿ ದುರಸ್ಥಿಯಲ್ಲಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಮಾಹಿತಿಯನ್ನು ನೀಡುವುದು) | ಕೊಪ್ಪಳ ಜಿಲ್ಲೆಯಲ್ಲಿ ಪ್ರಸಕ್ತ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದಾಗಿ ಒಟ್ಟು 190 ಅಂಗನವಾಡಿ ಕೇಂದ್ರಗಳು ಹಾನಿಗೊಂಡಿದ್ದು ದುರಸ್ತಿಯಲ್ಲಿರುತ್ತವೆ.<br>ತಾಲ್ಲೂಕುವಾರು ಅಂಗನವಾಡಿ ಕೇಂದ್ರಗಳ ವಿವರ ಕೆಳಕಂಡಂತಿವೆ: |
| ಆ. | ಸದರಿ ಅಂಗನವಾಡಿ ಕೇಂದ್ರಗಳ ದುರಸ್ಥಿಗಾಗಿ ಸಲ್ಲಿಸಿರುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ. | ಬಂದಿದ್ದಲ್ಲಿ, ಯಾವ ಹಂತದಲ್ಲಿದೆ; | ತಾಲ್ಲೂಕು ಪಂಚಾಯತಿಗಳಿಗೆ ಪ್ರತಿ ವರ್ಷ ಅಂಗನವಾಡಿ ಕೇಂದ್ರಗಳ ನಿರ್ವಹಣೆಗಾಗಿ ಅನುದಾನ ಒದಗಿಸಲಾಗುತ್ತಿದೆ. ಪ್ರಸಕ್ತ ಸಾಲಿನಲ್ಲಿ ಸಹ ಅನುದಾನ ಒದಗಿಸಲಾಗಿದೆ. |
| ಈ. | ಅಂಗನವಾಡಿ ಕೇಂದ್ರಗಳ ನಿರ್ವಹಣೆಗಾಗಿ ನಿಯಮಿತವಾಗಿ ಅನುದಾನವನ್ನು ಒದಗಿಸಲಾಗುತ್ತಿದೆಯೇ? ಒದಗಿಸಿದ್ದಲ್ಲಿ, (ಅನುದಾನದ ವಿವರಗಳನ್ನು ತಾಲ್ಲೂಕುವಾರು ನೀಡುವುದು) | ಹೌದು, ಒದಗಿಸಲಾಗಿದೆ.<br>ತಾಲ್ಲೂಕುವಾರು ಒದಗಿಸಿರುವ ಅನುದಾನದ ವಿವರ:- |

(ಅ.) ತಾಲ್ಲೂಕುವಾರು ಅಂಗನವಾಡಿ ಕೇಂದ್ರಗಳ ವಿವರ:

| ಕ್ರ.ಸಂ | ತಾಲ್ಲೂಕುವಾರು ವಿವರ | ಅಂಗನವಾಡಿ ಕೇಂದ್ರಗಳು |
|---|---|---|
| 1. | ಕೊಪ್ಪಳ | 22 |
| 2. | ಗಂಗಾವತಿ | 40 |
| 3. | ಕನಕಗಿರಿ | 11 |
| 4. | ಕಾರಟಗಿ | 32 |
| 5. | ಕುಷ್ಟಗಿ | 32 |
| 6. | ಕುಕನೂರು | 20 |
| 7. | ಯಲಬುರ್ಗಾ | 33 |

(ಈ.) ತಾಲ್ಲೂಕುವಾರು ಒದಗಿಸಿರುವ ಅನುದಾನದ ವಿವರ:

| ಕ್ರ.ಸಂ | ತಾಲ್ಲೂಕುವಾರು ವಿವರ | ಅನುದಾನ (ಲಕ್ಷಗಳಲ್ಲಿ) |
|---|---|---|
| 1. | ಕೊಪ್ಪಳ | 18.00 |
| 2. | ಗಂಗಾವತಿ/ಕನಕಗಿರಿ | 36.00 |
| 3. | ಕುಷ್ಟಗಿ | 18.00 |
| 4. | ಯಲಬುರ್ಗಾ | 18.00 |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 217 ಐಸಿಡಿ 2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 640

ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ. (ಹೊಳೆನರಸೀಪುರ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಹಾಸನ ಜಿಲ್ಲೆ ಹೊಳೆನರಸೀಪುರ ಟೌನ್‌ನಲ್ಲಿ ಕೆ.ಎಸ್.ಆರ್.ಟಿ.ಸಿ ಬಸ್ ನಿಲ್ದಾಣ ಸುಮಾರು 30 ವರ್ಷಗಳಷ್ಟು ಹಳೆಯದಾಗಿದ್ದು, ಈ ಹಿಂದೆ ಹೊಳೆನರಸೀಪುರ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಆಧುನೀಕರಣ ಹಾಗೂ ಕೆ.ಎಸ್.ಆರ್.ಟಿ.ಸಿ. ನೌಕರರ ವಸತಿ ಗೃಹಗಳ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಅನುದಾನವನ್ನು ಮಂಜೂರು ಮಾಡಿ ಕಾಮಗಾರಿಯನ್ನು ಕೈಗೆತ್ತಿಕೊಂಡಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹೌದು.<br>ಹಾಸನ ಜಿಲ್ಲೆ ಹೊಳೆನರಸೀಪುರ ಟೌನ್‌ನಲ್ಲಿರುವ ಬಸ್ ನಿಲ್ದಾಣವು ಶಿಥಿಲಾವಸ್ಥೆಯಲ್ಲಿದ್ದು, ಸದರಿ ಬಸ್ ನಿಲ್ದಾಣದ ಆಧುನೀಕರಣ ಕಾಮಗಾರಿ ಹಾಗೂ ಸಿಬ್ಬಂದಿ ವಸತಿಗೃಹಗಳ ನಿರ್ಮಾಣ ಕಾಮಗಾರಿ ಒಳಗೊಂಡಂತೆ ಬಸ್ ಘಟಕವನ್ನು ಆಧುನೀಕರಿಸುವ ಕಾಮಗಾರಿಗಳನ್ನು ಕೈಗೊಳ್ಳಲು 2018-19ನೇ ಸಾಲಿನ ವಿಶೇಷ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಕ್ರಮವಾಗಿ ರೂ.300.00 ಮತ್ತು ರೂ.250.00 ಲಕ್ಷಗಳು ಮಂಜೂರಾಗಿರುತ್ತದೆ. ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿರುತ್ತದೆ. |
| ಆ. | ಹೊಳೆನರಸೀಪುರ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಆಧುನೀಕರಣ ಹಾಗೂ ಕೆ.ಎಸ್.ಎಸ್.ಆರ್.ಸಿ. ನೌಕರರ ವಸತಿ ಗೃಹಗಳ ನಿರ್ಮಾಣ ಕಾಮಗಾರಿಗಳು ಮಂದಗತಿಯಿಂದ ಸಾಗುತ್ತಿರುವುದರಿಂದ ಗ್ರಾಮೀಣ ಪ್ರದೇಶದ ಜನತೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೋವಿಡ್-19ರ ಸಾಂಕ್ರಾಮಿಕ ರೋಗದಿಂದಾಗಿ ನಿಲ್ದಾಣದ ಆಧುನೀಕರಣ ಕಾಮಗಾರಿಯು ಲಾಕ್‌ಡೌನ್ ಅವಧಿಯಲ್ಲಿ ಸ್ಥಗಿತಗೊಂಡಿರುವುದರಿಂದ ಹಾಗೂ ಕಟ್ಟಡ ಸಾಮಗ್ರಿಗಳು ಮತ್ತು ಕೂಲಿಯಾಳುಗಳ ಕೊರತೆಯಿಂದಾಗಿ ಕೆಲಸವು ಮಂದಗತಿಯಲ್ಲಿ ನಡೆದಿತ್ತು, ಸದರಿ ಕಾಮಗಾರಿಗಳನ್ನು ಪುನ: ಪ್ರಾರಂಭಿಸಿದ್ದು, ಕೆಲಸವು ಪ್ರಗತಿಯಲ್ಲಿರುತ್ತದೆ. ಕಾಮಗಾರಿಗಳನ್ನು ತ್ವರಿತಗತಿಯಲ್ಲಿ ನಿರ್ವಹಿಸಿ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. |
| ಇ. | ಬಂದಿದ್ದಲ್ಲಿ, ಹೊಳೆನರಸೀಪುರ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಆಧುನೀಕರಣ ಹಾಗೂ ಕೆ.ಎಸ್.ಎಸ್.ಆರ್.ಸಿ. ನೌಕರರ ವಸತಿ ಗೃಹಗಳ ನಿರ್ಮಾಣ ಕಾಮಗಾರಿಗಳನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಬಸ್ ನಿಲ್ದಾಣ ಆಧುನೀಕರಣ ಮತ್ತು ಕೆ.ಎಸ್.ಆರ್.ಟಿ.ಸಿ ನೌಕರರ ವಸತಿಗೃಹಗಳ ಕಾಮಗಾರಿಗಳನ್ನು ಕ್ರಮವಾಗಿ ದಿನಾಂಕ: 17.10.2019 ಮತ್ತು 26-08-2019ರಂದು ಪ್ರಾರಂಭಿಸಿದ್ದು, ಟೆಂಡರ್‌ನಲ್ಲಿ ನಿಗದಿಪಡಿಸಿದ ಕೆಲಸದ ಕಾಲಮಿತಿ 9 ಮತ್ತು 12 ತಿಂಗಳುಗಳಾಗಿರುತ್ತದೆ. ಕೋವಿಡ್-19ನಿಂದಾಗಿ ಸ್ಥಗಿತಗೊಂಡಿದ್ದ ಕಾಮಗಾರಿಗಳು ಪ್ರಸ್ತುತ ಪ್ರಗತಿಯಲ್ಲಿದ್ದು, ಮುಂದಿನ 6 ತಿಂಗಳೊಳಗೆ ಪೂರ್ಣಗೊಳಿಸಲಾಗುವುದು. |

ಸಂಖ್ಯೆ: ಟಿಡಿ 231 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 644

ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪುತ್ತೂರು ವಿಧಾನಸಭಾ ಕ್ಷೇತ್ರದ ಉಪ್ಪಿನಂಗಡಿ ಪಟ್ಟಣವು ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿದ್ದು, ಕೆ.ಎಸ್.ಆರ್.ಟಿ.ಸಿ.ಯ ಅತ್ಯಧಿಕ ಬಸ್‌ಗಳು ಈ ಹೆದ್ದಾರಿಯಲ್ಲಿ ಹಾದುಹೋಗುತ್ತಿರುವ ಕಾರಣ ಇಲ್ಲಿ ಹೊಸದಾಗಿ ಬಸ್ಸು ತಂಗುದಾಣ ನಿರ್ಮಾಣ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಉಪ್ಪಿನಂಗಡಿಯಲ್ಲಿ ಬಸ್ ನಿಲ್ದಾಣ ನಿರ್ಮಾಣ ಮಾಡಲು ನಿವೇಶನ ಲಭ್ಯವಿರುವುದಿಲ್ಲ. ನಿಗಮಕ್ಕೆ ನಿವೇಶನ ಲಭ್ಯವಾದ ನಂತರ ಸಂಸ್ಥೆಯು ಬಸ್ ನಿಲ್ದಾಣ ನಿರ್ಮಾಣ ಮಾಡಲು ಹೊರಡಿಸಿರುವ ಸುತ್ತೋಲೆ ಸಂಖ್ಯೆ:01/2015-16 ದಿನಾಂಕ:06-06-2015 ರ ಪ್ರಕಾರ, ಸಾರಿಗೆ ಅವಶ್ಯಕತೆ ಹಾಗೂ ಆರ್ಥಿಕ ಲಭ್ಯತೆಯನ್ನು ಆಧರಿಸಿ ಈ ಬಗ್ಗೆ ಪರಿಶೀಲಿಸಲಾಗುವುದು. |
| ಆ. | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಇದುವರೆಗೆ ಕೈಗೊಂಡಿರುವ ಕ್ರಮಗಳೇನು? | ಸೂಕ್ತ ನಿವೇಶನ ಮಂಜೂರು ಮಾಡುವಂತೆ ಜಿಲ್ಲಾಡಳಿತವನ್ನು ಕೋರಲಾಗಿದೆ. |

ಸಂಖ್ಯೆ: ಟಿಡಿ 232 ಟಿಸಿಕ್ಯೂ 2020

**(ಲಕ್ಷ್ಮಣ ಸಂಗಪ್ಪ ಸವದಿ)**
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 645

ಸದಸ್ಯರ ಹೆಸರು : ಸಂಜೀವ ಮಠಂದೂರ್ (ಪುತ್ತೂರು)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪುತ್ತೂರು ವಿಭಾಗದಲ್ಲಿ ಕೆ.ಎಸ್.ಆರ್.ಟಿ.ಸಿ. ಬಸ್ಸುಗಳ ಸಂಖ್ಯೆ ಹೆಚ್ಚಿರುವ ಕಾರಣ ಹೊಸದಾಗಿ ಎರಡನೇ ಬಸ್ ಡಿಪೋ ತೆರೆಯುವ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಪುತ್ತೂರು ವಿಭಾಗದ ಪುತ್ತೂರು ಘಟಕದಲ್ಲಿ 133 ಅನುಸೂಚಿಗಳು (ಬಸ್ಸುಗಳು) ಸುಗಮವಾಗಿ ಕಾರ್ಯಾಚರಣೆಗೊಳ್ಳುತ್ತಿವೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಪುತ್ತೂರಿನಲ್ಲಿ ಹೊಸದಾಗಿ ಎರಡನೇ ಬಸ್ ಘಟಕ ತೆರೆಯುವ ಅವಶ್ಯಕತೆ ಇರುವುದಿಲ್ಲ. |
| ಆ. | ವಿಭಾಗದಲ್ಲಿ ಪ್ರಸ್ತುತ ಎಷ್ಟು ಕೆ.ಎಸ್.ಆರ್.ಟಿ.ಸಿ. ಬಸ್ಸುಗಳು ಎಷ್ಟು ಮಾರ್ಗಗಳಲ್ಲಿ ಕಾರ್ಯಾಚರಿಸುತ್ತಿವೆ? (ಮಾಹಿತಿ ನೀಡುವುದು) | ಪುತ್ತೂರು ವಿಭಾಗದಲ್ಲಿ 556 ಅನುಸೂಚಿಗಳಿಂದ 543 ಮಾರ್ಗಗಳಲ್ಲಿ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ. |

ಸಂಖ್ಯೆ: ಟಿಡಿ 233 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 655

ಸದಸ್ಯರ ಹೆಸರು : ಶ್ರೀ ದೇವಾನಂದ ಫುಲಸಿಂಗ್ ಚವಾಣ್ (ನಾಗಠಾಣ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 09-12-2020

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ನಾಗಠಾಣ ವಿಧಾನಸಭಾ ಕ್ಷೇತ್ರದಲ್ಲಿ ಶಿಥಿಲಾವಸ್ಥೆಯಲ್ಲಿರುವ ಅಂಗನವಾಡಿ ಕೇಂದ್ರಗಳು ಎಷ್ಟು; ಹಾಗೂ ಸ್ವಂತ ಕಟ್ಟಡವನ್ನು ಹೊಂದಿರದ ಅಂಗನವಾಡಿ ಕೇಂದ್ರಗಳ ಸಂಖ್ಯೆ ಎಷ್ಟು; (ವಿವರವಾದ ಮಾಹಿತಿ ನೀಡುವುದು)</td><td>
<table>
<tr><th>ಕ್ರ.ಸಂ</th><th>ಯೋಜನೆಯ ಹೆಸರು</th><th>ಮಂಜೂರಾದ ಅಂಗನವಾಡಿ ಕೇಂದ್ರಗಳು</th><th>ಸ್ವಂತ ಕಟ್ಟಡ ಇರುವ ಕೇಂದ್ರ ಗಳು</th><th>ಸ್ವಂತ ಕಟ್ಟಡ ಇಲ್ಲದೇ ಇರುವ ಕೇಂದ್ರಗಳು</th><th>ಶಿಥಿಲಾವಸ್ಥೆ ಯಲ್ಲಿ ಇರುವ ಅಂಗನವಾಡಿ ಕೇಂದ್ರಗಳು</th></tr>
<tr><td>1</td><td>ಚಡಚಣ</td><td>148</td><td>92</td><td>56</td><td>04</td></tr>
<tr><td>2</td><td>ವಿಜಯಪುರ(ನ)</td><td>72</td><td>31</td><td>41</td><td>01</td></tr>
<tr><td>3</td><td>ವಿಜಯಪುರ(ಗ್ರಾ)</td><td>108</td><td>75</td><td>33</td><td>05</td></tr>
<tr><td></td><td>ಒಟ್ಟು</td><td>328</td><td>198</td><td>130</td><td>10</td></tr>
</table>
</td></tr>
<tr><td>ಆ.</td><td>ಅಂಗನವಾಡಿ ಕಟ್ಟಡಗಳ ದುರಸ್ತಿಗೆ ಹಾಗೂ ಸ್ವಂತ ಅಂಗನವಾಡಿ ಕಟ್ಟಡಗಳನ್ನು ಹೊಂದಿರದ ಶಾಲೆಗಳಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಇದಕ್ಕಾಗಿ ಸರ್ಕಾರದಿಂದ ಬಿಡುಗಡೆಯಾದ ಅನುದಾನ ಎಷ್ಟು?</td><td>ಅಂಗನವಾಡಿ ಕಟ್ಟಡಗಳ ದುರಸ್ತಿಗೆ ಸರ್ಕಾರದಿಂದ ನೇರವಾಗಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ಗಳಿಗೆ ಪ್ರತಿ ಕಟ್ಟಡದ ದುರಸ್ತಿಗೆ ರೂ.50,000/-ಗಳಂತೆ ಒಟ್ಟು 26 ಕಟ್ಟಡಗಳಿಗೆ ರೂ.13.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>ವಿಶೇಷ ಅಭಿವೃದ್ಧಿ ಯೋಜನೆ ಅಡಿ ಸ್ವಂತ ಕಟ್ಟಡ ಹೊಂದಿರದ ಒಂದು ಅಂಗನವಾಡಿ ಕಟ್ಟಡ ನಿರ್ಮಿಸಲು ಕ್ರಮವಹಿಸಲಾಗಿದೆ. ನಿವೇಶನ ಮತ್ತು ಅನುದಾನದ ಲಭ್ಯತೆ ಆಧಾರದ ಮೇಲೆ ಬಾಕಿ ಕಟ್ಟಡಗಳ ನಿರ್ಮಾಣಕ್ಕೆ ಕ್ರಮಕೈಗೊಳಲಾಗುವುದು.</td></tr>
<tr><td>ಇ.</td><td>ಈ ವಿಧಾನಸಭಾ ಕ್ಷೇತ್ರದಲ್ಲಿ ಖಾಲಿ ಇರುವ ಅಂಗನವಾಡಿ ಮೇಲ್ವಿಚಾರಕಿ/ಸಹಾಯಕಿ ಹುದ್ದೆಗಳ ಭರ್ತಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಹುದ್ದೆಗಳು ಯಾವಾಗಿನಿಂದ ಖಾಲಿಯಿವೆ; ಈ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು? (ವಿವರವಾದ ಮಾಹಿತಿ ನೀಡುವುದು)</td><td>03 ಅಂಗನವಾಡಿ ಕಾರ್ಯಕರ್ತೆ ಹಾಗೂ 11 ಅಂಗನವಾಡಿ ಸಹಾಯಕಿಯರ ಹುದ್ದೆಗಳು ಏಪ್ರಿಲ್ 2020ರಿಂದ ಖಾಲಿ ಇರುತ್ತದೆ. ಸದರಿ ಹುದ್ದೆಗಳಿಗೆ ಆನ್ ಲೈನ್ ಮೂಲಕ ಅರ್ಜಿ ಕರೆದು ಶೀಘ್ರವಾಗಿ ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ.</td></tr>
</table>

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,

ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 220 ಐಸಿಡಿ 2020

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 656

ಸದಸ್ಯರ ಹೆಸರು : ಶ್ರೀ. ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ)

ಉತ್ತರಿಸಬೇಕಾದ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 09-12-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಂತಾಮಣಿ ತಾಲ್ಲೂಕಿನಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯವರ (ಎ.ಆರ್.ಟಿ.ಒ.) ಕಛೇರಿಗಾಗಿ ಜಮೀನು ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಹೌದು,<br>ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕು ಅಂಬಾಜಿದುರ್ಗ ಹೋಬಳಿ ಕೋನಪ್ಪಲ್ಲಿ ಗ್ರಾಮದ ಸರ್ವೆ ನಂ 129 ರಲ್ಲಿ 6-20 ಎಕರೆ ಗುಂಟೆ ಜಮೀನನ್ನು ಚಿಂತಾಮಣಿ ವಿಭಾಗದ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ ಕಟ್ಟಡ ಮತ್ತು ತರಬೇತಿ ಕೇಂದ್ರ ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ಜಮೀನು ಮಂಜೂರು ಮಾಡಲಾಗಿದೆ. |
| (ಆ) | ಹಾಗಿದ್ದಲ್ಲಿ, ಸದರಿ ಕಛೇರಿ ಕಟ್ಟಡಕ್ಕೆ ಸರ್ಕಾರದಿಂದ ಅನುದಾನ ಬಿಡುಗಡೆ ಮಾಡಲು ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಚಿಂತಾಮಣಿ ತಾಲ್ಲೂಕಿನಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯವರ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಂತಾಮಣಿ ಉಪವಿಭಾಗ, ಚಿಂತಾಮಣಿ ಇವರಿಗೆ ಅಂದಾಜುಪಟ್ಟಿ ಸಲ್ಲಿಸುವಂತೆ ದಿನಾಂಕ:17-10-2020ರ ಪತ್ರದಲ್ಲಿ ಕೋರಲಾಗಿದ್ದು, ಅಂದಾಜುಪಟ್ಟಿಯೊಂದಿಗೆ ಪ್ರಸ್ತಾವನೆ ಸ್ವೀಕೃತಗೊಂಡ ನಂತರ ಆಡಳಿತಾತ್ಮಕ ಅನುಮೋದನೆ ಹಾಗೂ ಅನುದಾನ ಬಿಡುಗಡೆ ಕುರಿತು ನಿಯಮಾನುಸಾರ ಪರಿಶೀಲಿಸಲಾಗುವುದು. |
| (ಇ) | ಯಾವ ಕಾಲಮಿತಿಯೊಳಗೆ ಅನುದಾನವನ್ನು ಬಿಡುಗಡೆ ಮಾಡಲಾಗುವುದು? | |

ಟಿಡಿ 103 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 657 |
| ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಕೃಷ್ಣಾರೆಡ್ಡಿ .ಎಂ. (ಚಿಂತಾಮಣಿ) |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು. |
| ಉತ್ತರಿಸುವ ದಿನಾಂಕ | : | 9.12.2020 |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಿಲ್ಲಾ, ತಾಲ್ಲೂಕು ಮಟ್ಟದಲ್ಲಿನ ಸಾಂತ್ವನ ಕೇಂದ್ರಗಳಲ್ಲಿಕೆಲಸ ಮಾಡುತ್ತಿರುವ ಸಿಬ್ಬಂದಿಗೆ ಏಪ್ರಿಲ್ 2020 ರಿಂದ ಮಾಸಿಕ ವೇತನಕ್ಕಾಗಿ ಅನುದಾನ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ. |
| ಆ) | ಹಾಗಿದ್ದಲ್ಲಿ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ One Stop Centre (ಸಖಿ) ಕೇಂದ್ರಗಳನ್ನು ಪ್ರಾರಂಭಿಸಿದ್ದರಿಂದ, 2020-21ನೇ ಸಾಲಿನಿಂದ ಸಾಂತ್ವನ ಯೋಜನೆಯನ್ನು ಸ್ಥಗಿತಗೊಳಿಸಲು ತೀರ್ಮಾನಿಸಿ ಆಯವ್ಯಯದಲ್ಲಿ ಅನುದಾನ ನಿಗಧಿ ಪಡಿಸಿರಲಿಲ್ಲ. ಆದರೆ One Stop Centre ಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ಸ್ಥಾಪಿಸಿರುವುದರಿಂದ ನೊಂದ ಮಹಿಳೆಯರು ಜಿಲ್ಲಾ ಕೇಂದ್ರಗಳಿಗೆ ಭೇಟಿ ಕೊಡಲು ಕಷ್ಟಕರವಾದ್ದರಿಂದ ಸಾಂತ್ವನ ಕೇಂದ್ರಗಳನ್ನು ದಿನಾಂಕ: 31.03.2021ರ ವರೆಗೆ ಮುಂದುವರೆಸಲು ಆರ್ಥಿಕ ಇಲಾಖೆಯು ಅನನುಮೋದನೆ ನೀಡಿದೆ. ಅದರಂತೆ ಇಲಾಖೆಯ ಇತರೆ ಯೋಜನೆಯಡಿ ಉಳಿತಾಯವಾಗುವ ಅನುದಾನದಲ್ಲಿ ಈ ಯೋಜನೆಗೆ ಅನುದಾನವನ್ನು ಪುನರ್ ವಿನಿಯೋಗದ ಮೂಲಕ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಕ್ರಮವಹಿಸಲಾಗುತ್ತಿದೆ. |
| ಇ) | ಜಿಲ್ಲಾ ಕೇಂದ್ರಗಳಲ್ಲಿ ನೊಂದ ಮಹಿಳೆಯರ ವಿಶೇಷ ಘಟಕ ಸ್ಥಾಪಿಸಿದ್ದು, ತಾಲ್ಲೂಕು ಕೇಂದ್ರಗಳಿಂದ ನೊಂದ ಮಹಿಳೆಯರು ಜಿಲ್ಲಾ ಮಟ್ಟದಲ್ಲಿ ಹೋಗಿ ಅವರ ಸಮಸ್ಯೆಗಳನ್ನು ಹೇಳಿಕೊಳ್ಳಲು ತುಂಬಾ ಕಷ್ಟಕರವಾಗಿರುವ ವಿಚಾರವು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ. ಈ ಹಿನ್ನೆಲೆಯಲ್ಲಿಯೇ ಸದ್ಯ ಇರುವ ತಾಲ್ಲೂಕು ಮಟ್ಟದ ಸಾಂತ್ವನ ಕೇಂದ್ರಗಳನ್ನು ಮುಂದುವರೆಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಪ್ರಸ್ತುತ ತಾಲ್ಲೂಕು ಮಹಿಳಾ ಸಾಂತ್ವನ ಕೇಂದ್ರಗಳನ್ನು ಮುಂದುವರಿಸಿಕೊಂಡು ಹೋಗಲು ತೆಗೆದುಕೊಂಡ ಕ್ರಮಗಳೇನು? | ಪ್ರಸುತ ಕಾರ್ಯನಿರ್ವಹಿಸುತ್ತಿರುವ ಸಾಂತ್ವನ ಕೇಂದ್ರಗಳನ್ನು ದಿನಾಂಕ:31.3.2021ರವರೆಗೆ ಮುಂದುವರೆಸಲು ಅನುಮೋದನೆ ನೀಡಲಾಗಿದೆ. ದಿನಾಂಕ:01.04.2021ರ ನಂತರ ಸಂತ್ರಸ್ತ ಮಹಿಳೆಯರಿಗೆ ಯಾವುದೇ ಸಮಾಲೋಚನಾ ಕೇಂದ್ರಗಳು ಇಲ್ಲದೇ ಇರುವ ತಾಲ್ಲೂಕುಗಳಲ್ಲಿ ಮಾತ್ರ ಸಾಂತ್ವನ ಕೇಂದ್ರಗಳನ್ನು ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗುವುದು. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 123 ಮಮಅ 2020

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್.ಕೆ. (ಉಡುಪಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **678** |
| ಉತ್ತರಿಸಬೇಕಾದ ದಿನಾಂಕ | : | 09.12.2020 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮೀಣ ಭಾಗದಲ್ಲಿ ವಿವಿಧ ವಸತಿ ಯೋಜನೆಯಡಿ ಮನೆ ಮಂಜೂರಾದ ಫಲಾನುಭವಿಗಳ ಮನೆಯ ವಿವಿಧ ಹಂತದ ಜಿ.ಪಿ.ಎಸ್. ಸೇರಿದಂತೆ ಇನ್ನಿತರ ದಾಖಲೆಗಳನ್ನು ಸಂಬಂಧಪಟ್ಟ ಪೋರ್ಟಲ್ ನಲ್ಲಿ ಇಂಧೀಕರಿಸುವಲ್ಲಿ ಇರುವ ತಾಂತ್ರಿಕ ಸಮಸ್ಯೆಯಿಂದ ಅರ್ಹ ಫಲಾನುಭವಿಗಳ ಖಾತೆಗೆ ಹಣ ಜಮಾವಣೆಯಾಗದೆ ಸಮಸ್ಯೆಯಾಗುತ್ತಿರುವುದನ್ನು ಗಂಭೀರವಾಗಿ ಪರಿಗಣಿಸಲಾಗಿದೆಯೇ ; | ರಾಜ್ಯದ ವಿವಿಧ ಕಡೆಗಳಲ್ಲಿ ಅನರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಿ ಅನುದಾನ ದುರ್ಬಳಕೆ ಮಾಡಿಕೊಂಡ ಬಗ್ಗೆ ವ್ಯಾಪಕ ದೂರುಗಳು ಬಂದ ಹಿನ್ನಲೆಯಲ್ಲಿ ಹಾಗೂ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರವು ದಿನಾಂಕ:16.11.2019 ರಂದು ಆದೇಶ ಹೊರಡಿಸಿ ಈಗಾಗಲೇ ಪ್ರಗತಿಯಲ್ಲಿರುವ ಹಾಗೂ ಅನುದಾನ ಬಿಡುಗಡೆಗೆ ಬೇಡಿಕೆ ಇರುವ ಮನೆಗಳನ್ನು Geo ಆಧಾರಿತ Vigil App ಮೂಲಕ ಪರಿಶೀಲಿಸಲು ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯ್ತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಪರಿಶೀಲನಾ ಸಮಿತಿಯಿಂದ ನಿಗಮಕ್ಕೆ ಸಲ್ಲಿಸಲಾಗುವ ಅರ್ಹ ಫಲಾನುಭವಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. |
| (ಆ) | ಹಾಗಿದ್ದಲ್ಲಿ, ಗ್ರಾಮೀಣ ಭಾಗದ ಈ ಪ್ರಮುಖ ಸಮಸ್ಯೆ ಕುರಿತು ರಾಜೀವ ಗಾಂಧಿ ವಸತಿ ನಿಗಮದ ಜೊತೆ ಚರ್ಚಿಸಿ ಸೂಕ್ತ ಪರಿಹಾರ ಕಲ್ಪಿಸುವಲ್ಲಿ ಯಾವ ಕ್ರಮ ಕೈಗೊಳ್ಳಲಾಗಿದೆ ? | ಯಾವುದಾದರೂ ತಾಂತ್ರಿಕ ಸಮಸ್ಯೆ ಬಂದಲ್ಲಿ ಅಂತಹವುಗಳನ್ನು ಗಂಭೀರವಾಗಿ ಪರಿಗಣಿಸಿ ಪರಿಹರಿಸಿ ಫಲಾನುಭವಿಗಳಿಗೆ ನಿಗಮದಿಂದ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ :ವಇ 401 ಹೆಚ್‌ಎಎಂ 2020

**(ವಿ. ಸೋಮಣ್ಣ)**
ವಸತಿ ಸಚಿವರು

**ಕರ್ನಾಟಕ ವಿಧಾನ ಸಭೆ**
**15ನೇ ವಿಧಾನ ಸಭೆ 8ನೇ ಅಧಿವೇಶನ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 683
ಸದಸ್ಯರ ಹೆಸರು : ಯತೀಂದ್ರ ಸಿದ್ದರಾಮಯ್ಯ ಡಾ॥ (ವರುಣ)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮೀಣ ಪ್ರದೇಶದಲ್ಲಿ ಗ್ರಾಮ ಪಂಚಾಯಿತಿ ಮಿತಿಯ ವ್ಯಾಪ್ತಿಯಲ್ಲಿ ಬರುವ ಪ್ರದೇಶದಲ್ಲಿ ಬಹಳ ಹಿಂದೆ ಗ್ರಾಮಠಾಣ ಗಡಿಯನ್ನು ಗುರುತಿಸಿದ್ದು ಈಗಲೂ ಸಹ ಅದೇ ಗಡಿಯ ಮಿತಿಯಲ್ಲಿಯೇ ಮಾತ್ರವೇ ಇ-ಸ್ವತ್ತು ನಿರ್ವಹಣೆ ಮಾಡಲಾಗುತ್ತಿದೆಯೇ; | ಹೌದು. |
| (ಆ) | ಹಾಗಿದ್ದಲ್ಲಿ, ಪ್ರಸ್ತುತ ಬಹಳಷ್ಟು ಗ್ರಾಮೀಣ ಪ್ರದೇಶಗಳು ವಿಸ್ತಾರವಾಗಿದ್ದು, ಗ್ರಾಮಠಾಣ ವ್ಯಾಪ್ತಿಯಲ್ಲಿ ಸ್ಥಳಾವಕಾಶವಿಲ್ಲದೆ ಗಡಿಯ ಎಲ್ಲೆಯನ್ನು ಮೀರಿದ್ದು, ಜನರಿಗೆ ಇ-ಸ್ವತ್ತು ನೀಡಲು ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಇ) | ಬಂದಿದ್ದಲ್ಲಿ, ಗ್ರಾಮಠಾಣ ವ್ಯಾಪ್ತಿ ಗಡಿಯನ್ನು ವಿಸ್ತರಿಸಲು ಸರ್ಕಾರವು ತೆಗೆದುಕೊಂಡ ಕ್ರಮವೇನು (ವಿವರ ನೀಡುವುದು)? | ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮಠಾಣಾ ಗಡಿ ತುಂಬಾ ಹಿಂದೆ ನಿಗಧಿಪಡಿಸಿದ್ದು, ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸುವ ಬಗ್ಗೆ ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ದಿನಾಂಕ:28-10-2016 ರಂದು ಹೊರಡಿಸಿರುವ ಜಂಟಿ ಸುತ್ತೋಲೆ ಮೂಲಕ ಕೆಲವು ಮಾರ್ಗಸೂಚಿಗಳನ್ನು ನೀಡಿದೆ. ಅದರಂತೆ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸಲು ಕ್ರಮ ವಹಿಸಲಾಗುತ್ತಿದೆ. |

ಸಂ. ಗ್ರಾಅಪ 853 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

1. ಸದಸ್ಯರ ಹೆಸರು : ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ|| (ವರುಣ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 684
3. ಉತ್ತರಿಸಬೇಕಾದ ದಿನಾಂಕ : 09-12-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನರೇಗಾ ಯೋಜನೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಹಳಷ್ಟು ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಕಲ್ಪಸಿದ್ದು, ಈ ಯೋಜನೆಯಲ್ಲಿ ಕೈಗೊಳ್ಳುವ ಕಾಮಗಾರಿಗೆ ಅವಶ್ಯವಿರುವ ಸಾಮಗ್ರಿಗಳಿಗೆ ಅನುದಾನ ಮಂಜೂರು ಮಾಡದೆ ಇರುವುದರಿಂದ ಯೋಜನೆಯ ಕುಂಠಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಪ್ರಗತಿಯಲ್ಲಿ ಕುಂಠಿತವಾಗಿರುವುದಿಲ್ಲ. ಯೋಜನೆಯಡಿ 2020-21 ನೇ ಸಾಲಿಗೆ 13 ಕೋಟಿ ಮಾನವ ದಿನಗಳ ಉದ್ಯೋಗ ಸೃಜನೆ ಮಾಡುವ ಗುರಿ ನೀಡಲಾಗಿದ್ದು ಇಲ್ಲಿಯವರೆಗೆ (ದಿನಾಂಕ: 07-12-2020) 11.08 ಕೋಟಿ ಮಾನವ ದಿನಗಳ ಉದ್ಯೋಗ ಸೃಜನೆ ಮಾಡುವ ಮೂಲಕ ವಾರ್ಷಿಕ ಗುರಿಯ ಶೇ. 85.28 ರಷ್ಟು ಸಾಧನೆ ಮಾಡಲಾಗಿದೆ. |
| ಆ) | ಬಂದಿದ್ದಲ್ಲಿ, ಅನುದಾನವನ್ನು ಸಕಾಲದಲ್ಲಿ ಮಂಜೂರು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮವೇನು (ಮಾಹಿತಿ ನೀಡುವುದು)? | ಕೇಂದ್ರ ಸರ್ಕಾರದಿಂದ ಅನುದಾನ ಬಿಡುಗಡೆಯನ್ನು ಆಧರಿಸಿ ಸಾಮಗ್ರಿ ವೆಚ್ಚಗಳಿಗಾಗಿ ನಿಯಮಿತವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. 2020-21 ನೇ ಸಾಲಿನಲ್ಲಿ ಯೋಜನೆಯ ಅನುಷ್ಠಾನಕ್ಕಾಗಿ ಬಿಡುಗಡೆ ಮಾಡಿದ ಅನುದಾನದ ವಿವರ:-<br>ಕೂಲಿ ವೆಚ್ಚ: ರೂ 2998.47 ಕೋಟಿ<br>ಸಾಮಗ್ರಿ ವೆಚ್ಚ: ರೂ. 975.08 ಕೋಟಿ<br>ಸಾಮಗ್ರಿ ವೆಚ್ಚ ಪಾವತಿಸಲು ಅಗತ್ಯವಿರುವ ಅನುದಾನ ಬಿಡುಗಡೆ ಮಾಡುವಂತೆ ಕೋರಿ ಕೇಂದ್ರ ಸರ್ಕಾರಕ್ಕೆ ಮನವಿ ಸಲ್ಲಿಸಲಾಗಿದೆ. |

ಸಂಖ್ಯೆ: ಗ್ರಾಅಪ 38(255) ಉಖಾಯೋ 2019

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಃ | 688 |
| ಸದಸ್ಯರ ಹೆಸರು | ಃ | ಶ್ರೀ.ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) |
| ಉತ್ತರಿಸುವ ದಿನಾಂಕ | ಃ | 09.12.2020 |
| ಉತ್ತರಿಸುವ ಸಚಿವರು | ಃ | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಜಮಖಂಡಿ ಮತ ಕ್ಷೇತ್ರದ ಹಿರೇಪಡಸಲಗಿ ಗ್ರಾಮಕ್ಕೆ ಪಶು ಆಸ್ಪತ್ರೆ ಮಂಜೂರು ಮಾಡುವ ಅತಿ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಬಂದಿದ್ದಲ್ಲಿ, ಪ್ರಸಕ್ತ ವರ್ಷ ಹೊಸದಾಗಿ ಪಶು ಆಸ್ಪತ್ರೆ ಮಂಜೂರು ಮಾಡುವ ಚಿಂತನೆ ಸರ್ಕಾರಕ್ಕೆ ಇದೆಯೇ? | ಉದ್ಭವಿಸುವುದಿಲ್ಲ |

**ಸಂ: ಪಸಂಮೀ ಇ-188 ಪಸಸೇ 2020**

**(ಪ್ರಭು. ಬಿ.ಚವ್ಹಾಣ್)**
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ : 690

ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ(ಜಮಖಂಡಿ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

ಉತ್ತರಿಸುವ ದಿನಾಂಕ : 09-12-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಅಂಗನವಾಡಿ ಮಕ್ಕಳ ಔಷಧಿ ಖರೀದಿಯಲ್ಲಿ ಅಕ್ರಮ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಬಂದಿರುವುದಿಲ್ಲ |
| ಆ) | ಅಂಗನವಾಡಿ ಕೇಂದ್ರದ ಮಕ್ಕಳಿಗೆ ಸರ್ಕಾರಿ ಸ್ವಾಮ್ಯದ ಕೆ.ಎ.ಪಿಎಲ್ ಸಂಸ್ಥೆಯಿಂದ ಔಷದಿ ಪೂರೈಕೆ ಮಾಡುತ್ತಿರುವುದನ್ನು ರದ್ದುಪಡಿಸಿ, ಖಾಸಗಿ ಕಂಪನಿಯವರಿಗೆ ನೀಡುವ ಚಿಂತನೆ ಇದಯೇ: ಇದ್ದಲ್ಲಿ ಯಾವ ಕಂಪನಿಗೆ ನೀಡಲಾಗುವುದು: | 2018-19ನೇ ಸಾಲಿನಲ್ಲಿ ಔಷಧಿ ಕಿಟ್ ಗಳನ್ನು ಅಂಗನವಾಡಿ ಕೇಂದ್ರಗಳಿಗೆ ಖರೀದಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಕರ್ನಾಟಕ ಸ್ಟೇಟ್ ಡ್ರಗ್ಸ್ ಲಾಜಿಸ್ಟಿಕ್ & ವೇರ್ ಹೌಸಿಂಗ್ ಸೊಸೈಟಿ ಇವರಿಗೆ ಖರೀದಿಸಿ ಇಲಾಖೆಗೆ ಸರಬರಾಜು ಮಾಡಲು ಅನುಮತಿ ನೀಡಿರುತ್ತದೆ. 2019-2020ನೇ ಸಾಲಿನಲ್ಲಿಯೂ ಸಹ ಔಷಧಿ ಕಿಟ್ ಗಳನ್ನು ಅಂಗನವಾಡಿ ಕೇಂದ್ರಗಳಿಗೆ ಖರೀದಿಸುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.<br>ಅಂಗನವಾಡಿ ಕೇಂದ್ರಗಳಿಗೆ ಔಷಧಿ ಕಿಟ್ ಗಳನ್ನು ಪೂರೈಕೆ ಮಾಡಲು ಖಾಸಗಿ ಕಂಪನಿಗಳಿಗೆ ನೀಡುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ |
| ಇ) | ಈ ರೀತಿ ಖಾಸಗಿ ಕಂಪನಿಗಳಿಗೆ ಔಷದಿ ಪೂರೈಕೆ ಮಾಡಲು ಅನುಮತಿ ನೀಡಿದಲ್ಲಿ ಮಕ್ಕಳ ಕಾಳಜಿ ದೃಷ್ಟಿಯಿಂದ ಮಾರಕವಲ್ಲವೇ:? | ಮೇಲಿನ ಉತ್ತರದಿಂದ ಉದ್ಭವಿಸುವುದಿಲ್ಲ |
| ಈ) | ಈ ರೀತಿ ಖಾಸಗಿ ಕಂಪನಿಗಳಿಗೆ ನೀಡುತ್ತಿರುವ ಸರ್ಕಾರದ ಔಚಿತ್ಯವೇನು? ಈ ಬಗ್ಗೆ (ಸಂಪೂರ್ಣ ಮಾಹಿತಿ ಒದಗಿಸುವುದು) | ಮೇಲಿನ ಉತ್ತರದಿಂದ ಉದ್ಭವಿಸುವುದಿಲ್ಲ |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 225 ಐಸಿಡಿ 2020

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 707

ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಮಂಡ್ಯ ವಿಧಾನಸಭಾ ಕ್ಷೇತ್ರದ ಬಸರಾಳು ಹೋಬಳಿ ಕೇಂದ್ರದಲ್ಲಿ ಸಾರಿಗೆ ನಿಗಮದ ಬಸ್ಸು ನಿಲ್ದಾಣ ನಿರ್ಮಾಣಕ್ಕೆ ಅನುಮೋದನೆ ದೊರೆತು 10 ವರ್ಷಗಳೆ ಕಳೆದಿದ್ದರೂ, ಈವರೆಗೂ ಕಾಮಗಾರಿ ಪ್ರಾರಂಭವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಡ್ಯ ವಿಧಾನಸಭಾ ಕ್ಷೇತ್ರದ ಬಸರಾಳು ಹೋಬಳಿ ಕೇಂದ್ರದಲ್ಲಿ 2018-19ನೇ ಸಾಲಿನ ಮೂಲಭೂತ ಸೌಕರ್ಯ ಅಭಿವೃದ್ಧಿ ಯೋಜನೆಯ ಬಂಡವಾಳ ವೆಚ್ಚದ ಅನುದಾನದಡಿಯಲ್ಲಿ ಬಸ್ ನಿಲ್ದಾಣ ನಿರ್ಮಾಣ ಕೈಗೊಳ್ಳಲು ಉದ್ದೇಶಿಸಲಾಗಿತ್ತು. ಆದರೆ ನಿವೇಶನ ಲಭ್ಯತೆ ಇಲ್ಲದಿರುವ ಕಾರಣದಿಂದ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗಿರುವುದಿಲ್ಲ. |
| ಆ. | ಈ ಕುರಿತು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು; | ಮಂಡ್ಯ ವಿಧಾನಸಭಾ ಕ್ಷೇತ್ರದ ಬಸರಾಳು ಹೋಬಳಿ ಕೇಂದ್ರದಲ್ಲಿ ಮುಂದಿನ ದಿನಗಳ ಸಾರಿಗೆ ಅವಶ್ಯಕತೆಗೆ ಅನುಗುಣವಾಗಿ ಸಾರಿಗೆ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿಪಡಿಸಲು ಬಸರಾಳು ಗ್ರಾಮದ ಸ.ಸಂಖ್ಯೆ:3 & 4 ರಲ್ಲಿ 20 ಗುಂಟೆ ನಿವೇಶನವು ಮಂಜೂರಾಗಿರುತ್ತದೆ. ಸದರಿ ನಿವೇಶನವನ್ನು ಕ.ರಾ.ರ.ಸಾ.ನಿಗಮದ ವಶಕ್ಕೆ ಪಡೆಯುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತವೆ. |
| ಇ. | ಯಾವಾಗ ಸಾರಿಗೆ ನಿಗಮದ ಬಸ್ಸು ನಿಲ್ದಾಣ ಕಾಮಗಾರಿ ಪ್ರಾರಂಭವಾಗುವುದು? | ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ನಿಗಮವು ತೀವ್ರ ಆರ್ಥಿಕ ಸಂಕಷ್ಟದಲ್ಲಿದ್ದು, ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಕಷ್ಟಕರವಾಗಿದೆ. ನಿಗಮವು ಹೊರಡಿಸಿರುವ ಸುತ್ತೋಲೆ ಸಂಖ್ಯೆ:1/2015-16 ದಿ:06-06-2015ರ ಮಾರ್ಗಸೂಚಿ ಪ್ರಕಾರ ಸಾರಿಗೆ ಅವಶ್ಯಕತೆ ಹಾಗೂ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ಮುಂದಿನ ದಿನಗಳಲ್ಲಿ ಈ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ: ಟಿಡಿ 244 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

**ಕರ್ನಾಟಕ ವಿಧಾನ ಸಭೆ**
**15ನೇ ವಿಧಾನ ಸಭೆ 8ನೇ ಅಧಿವೇಶನ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 715
ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ (ಮಂಗಳೂರು)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯಿತಿ ಗ್ರಂಥಾಲಯಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗ್ರಂಥಾಲಯ ಮೇಲ್ವಿಚಾರಕರಿಗೆ ಕಳೆದ 3 ವರ್ಷಗಳಿಂದ ವೇತನ ಲಭಿಸದಿರುವುದು ಸರ್ಕಾರದ ಗಮನದಲ್ಲಿದೆಯೇ; | ಗ್ರಾಮ ಪಂಚಾಯತಿ ಗ್ರಂಥಾಲಯಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗ್ರಂಥಾಲಯ ಮೇಲ್ವಿಚಾರಕರಿಗೆ ಕಳೆದ 3 ವರ್ಷಗಳಿಂದ ಗೌರವ ಸಂಭಾವನೆ ಪಾವತಿಸಲಾಗುತ್ತಿದೆ. ಗೌರವ ಸಂಭಾವನೆ ಪಾವತಿಯಲ್ಲಿ ಯಾವುದೇ ವಿಳಂಬವಾಗಿರುವುದಿಲ್ಲ.<br><br>2020-21ನೇ ಸಾಲಿನಲ್ಲಿ ನವೆಂಬರ್ ಮಾಹೆವರೆಗೆ ಗ್ರಂಥಾಲಯ ಮೇಲ್ವಿಚಾರಕರಿಗೆ ಸಂಭಾವನೆ ಪಾವತಿಸಲು ಕ್ರಮ ವಹಿಸಲಾಗಿದೆ. |
| (ಆ) | ಈ ಮೇಲ್ವಿಚಾರಕರಿಗೆ ವೇತನವನ್ನು ನಿಯಮಿತವಾಗಿ ಪಾವತಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ. |
| (ಇ) | ಗ್ರಂಥಾಲಯಗಳನ್ನು ದಿನಕ್ಕೆ 8 ಗಂಟೆಗಳ ಕಾಲ ತೆರೆದಿಟ್ಟು ಸಾರ್ವಜನಿಕರಿಗೆ ಸೇವೆ ನೀಡುವಂತೆ ಮಾಡುವ ಉದ್ದೇಶ ಸರ್ಕಾರದ ಮುಂದಿದೆಯೇ? | ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ. |

ಸಂ. ಗ್ರಾಅಪ 860 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ – 716

ಉತ್ತರಿಸಬೇಕಾದ ದಿನಾಂಕ – 09-12-2020

ಸದಸ್ಯರ ಹೆಸರು – ಶ್ರೀ. ಖಾದರ್ ಯು.ಟಿ. (ಮಂಗಳೂರು)

ಉತ್ತರಿಸುವ ಸಚಿವರು – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿರುವ ಮುಸ್ಲಿಂ ವಸತಿ ಶಾಲೆಗಳ ಭೋಧಕ ಮತ್ತು ಭೋದಕೇತರ ಸಿಬ್ಬಂದಿಗಳನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸದಿರಲು ಕಾರಣವೇನು; | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿರುವ 05 ಮುಸ್ಲಿಂ ವಸತಿ ಶಾಲೆಗಳ ನೌಕರರನ್ನು ಸರ್ಕಾರಿ ನೌಕರರೆಂದು ಪರಿಗಣಿಸುವಲ್ಲಿ ವಿಶೇಷ ವಿಲೀನಾತಿ ನಿಯಮಗಳನ್ನು ರಚಿಸುವ ಪ್ರಶ್ನೆಯು ಮೂಲತಃ ಉದ್ಭವಿಸುವುದಿಲ್ಲ ಎಂದು ಆರ್ಥಿಕ ಇಲಾಖೆಯವರು ಅಭಿಪ್ರಾಯ ನೀಡಿರುವುದರಿಂದ ಸದರಿ ವಸತಿ ಶಾಲೆಗಳ ಸಿಬ್ಬಂದಿಯನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸುವ ಪ್ರಸ್ತಾವನೆಯನ್ನು ಕೈಬಿಡಲಾಗಿದೆ. |
| ಆ) | ಈ ಸಿಬ್ಬಂದಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ವ್ಯಾಪ್ತಿಯೊಳಗೆ ಪರಿಗಣಿಸಿ ಸೇವಾ ಸೌಲಭ್ಯಗಳನ್ನು ನೀಡಲು ಸರ್ಕಾರ ಕ್ರಮ ಕೈಗೊಂಡಿದೆಯೇ; (ವಿವರ ನೀಡುವುದು) | |
| ಇ) | ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಲ್ಲಿ ಅರಿವು ಯೋಜನೆಯ ಮೂಲಕ ಸಾಲಕ್ಕೆ ಅರ್ಜಿ ಸಲ್ಲಿಸಿರುವ ವಿದ್ಯಾರ್ಥಿಗಳಿಗೆ ಈವರೆಗೆ ಸಾಲ ಮಂಜೂರಾಗದಿರಲು ಕಾರಣವೇನು; | ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಿಂದ 2019-20ನೇ ಸಾಲಿನಲ್ಲಿ 39,540 ವಿದ್ಯಾರ್ಥಿಗಳಿಗೆ ರೂ.155.63ಕೋಟಿ ಹಾಗೂ 2020-21ನೇ ಸಾಲಿನಲ್ಲಿ ನವೆಂಬರ್ ಅಂತ್ಯದವರೆಗೆ 4,402 ವಿದ್ಯಾರ್ಥಿಗಳಿಗೆ ರೂ.22.39 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. |
| ಈ) | ಯಾವ ಕಾಲಮಿತಿಯೊಳಗೆ ಮಂಜೂರು ಮಾಡಲಾಗುವುದು? | ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಹಿತದೃಷ್ಟಿಯಿಂದ ಶೀಘ್ರವೇ ಸೂಕ್ತ ಕ್ರಮ ಕೈಗೊಳ್ಳಲಾಗುತ್ತದೆ. |

ಸಂಖ್ಯೆ:MWD 178 LMQ 2020

(ಶ್ರೀಮಂತ ಬಾಳಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಉಮಾನಾಥ ಎ. ಕೋಟ್ಯಾನ್(ಮೂಡಬಿದ್ರೆ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 719

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 09.12.2020

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ವಿದ್ಯಾವಿಕಾಸ ಯೋಜನೆಯಡಿಯಲ್ಲಿ ಕೆಹೆಚ್.ಡಿ.ಸಿ ಯವರಿಂದ ಸಮವಸ್ತ್ರ ಬಟ್ಟೆ ಖರೀದಿ, ವಾರ್ಷಿಕ ಬೇಡಿಕೆ ಮತ್ತು ಪೂರೈಕೆ, ಪ್ರಸ್ತುತ ನಷ್ಟದ ವಿವರ ನೀಡುವುದು.</td><td>2020-21ನೇ ಸಾಲಿನಲ್ಲಿ ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಿಂದ ವಾರ್ಷಿಕ ಸಮವಸ್ತ್ರ ಬೇಡಿಕೆ/ ಪೂರೈಕೆ/ ಪ್ರಸ್ತುತ ನಷ್ಟದ ವಿವರ ಈ ಕೆಳಗಿನಂತಿದೆ:-<br><br>
<table>
<tr><th>ಉತ್ಪಾದನೆ/ಪೂರೈಕೆ (ಲಕ್ಷ ಮೀಟರ್ ಗಳಲ್ಲಿ)</th><th>ವಾರ್ಷಿಕ ಮೊತ್ತ (ರೂ. ಕೋಟಿಗಳಲ್ಲಿ)</th><th>ನಷ್ಟ (ರೂ. ಕೋಟಿಗಳಲ್ಲಿ)</th></tr>
<tr><td>36.45</td><td>27.79</td><td>6.85</td></tr>
</table></td></tr>
<tr><td>ಆ)</td><td>2020-21ನೇ ಶೈಕ್ಷಣಿಕ ವರ್ಷಕ್ಕಾಗಿ ಶಾಲಾ ಮಕ್ಕಳಿಗೆ ಸಮವಸ್ತ್ರ ಪೂರೈಸುವ ನಿಟ್ಟಿನಲ್ಲಿ ಶಿಕ್ಷಣ ಇಲಾಖೆಯು ವಿದ್ಯಾವಿಕಾಸ ಯೋಜನೆಯಡಿ ಸಮವಸ್ತ್ರವನ್ನು ಖರೀದಿಸಲಾಗಿದೆಯೇ; (ವಿವರ ನೀಡುವುದು)</td><td>ಶಿಕ್ಷಣ ಇಲಾಖೆಯು 2020-21ನೇ ಶೈಕ್ಷಣಿಕ ವರ್ಷಕ್ಕಾಗಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಿಂದ ಶಾಲಾ ಮಕ್ಕಳಿಗೆ ಸಮವಸ್ತ್ರವನ್ನು ಖರೀದಿಸಿದ್ದು, ವಿವರ ಈ ಕೆಳಗಿನಂತಿದೆ:-<br>(ಲಕ್ಷ ಮೀಟರ್ ಗಳಲ್ಲಿ)<br>
<table>
<tr><th>ಶರ್ಟಿಂಗ್ ಬಟ್ಟೆ</th><th>ಸ್ಕರ್ಟ್ ಬಟ್ಟೆ</th><th>ಸೂಟಿಂಗ್ ಬಟ್ಟೆ</th></tr>
<tr><td>20.52</td><td>10.09</td><td>5.83</td></tr>
</table></td></tr>
<tr><td>ಇ)</td><td>ಶೈಕ್ಷಣಿಕ ವರ್ಷಕ್ಕಾಗಿ ಸಮವಸ್ತ್ರ ಖರೀದಿಸುವ/ಖರೀದಿಸಿದ ಕೆ.ಹೆಚ್.ಡಿ.ಸಿ. ಯವರೊಂದಿಗೆ ಮಾಡಿಕೊಂಡ ಒಪ್ಪಂದದ ವಿವರ, ಬಟ್ಟೆ ಖರೀದಿ ಪ್ರಮಾಣ ಮತ್ತು ದರದ ವಿವರ ಗಳನ್ನೊದಗಿಸುವುದು?</td><td>2018-19ನೇ ಶೈಕ್ಷಣಿಕ ಸಾಲಿನಿಂದ 2020-21ನೇ ಶೈಕ್ಷಣಿಕ ಸಾಲಿನವರೆಗೆ ಪ್ರತಿ ವರ್ಷ ಗರಿಷ್ಠ 50 ಲಕ್ಷ ಮೀಟರ್ ಸಮವಸ್ತ್ರ ಬಟ್ಟೆಗಳನ್ನು ಸರಬರಾಜು ಮಾಡಲು ಕೆ.ಹೆಚ್.ಡಿ.ಸಿ. ನಿಗಮದೊಂದಿಗೆ ಶಿಕ್ಷಣ ಇಲಾಖೆಯು ಒಡಂಬಡಿಕೆ ಮಾಡಿಕೊಂಡಿದ್ದು, ದರದ ವಿವರ ಈ ಕೆಳಕಂಡಂತಿದೆ:-<br><br>
<table>
<tr><th>ವಿವರ</th><th>ದರ ಪ್ರತಿ ಮೀಟರ್ ಗೆ (ರೂ. ಗಳಲ್ಲಿ)</th></tr>
<tr><td>ಶರ್ಟಿಂಗ್ ಬಟ್ಟೆ</td><td>65.00</td></tr>
<tr><td>ಸ್ಕರ್ಟ್ ಬಟ್ಟೆ</td><td>68.00</td></tr>
<tr><td>ಸೂಟಿಂಗ್ ಬಟ್ಟೆ</td><td>130.00</td></tr>
</table><br>
ಪ್ರತಿ ಶೈಕ್ಷಣಿಕ ವರ್ಷಕ್ಕೆ ಶಿಕ್ಷಣ ಇಲಾಖೆ ನೀಡುವ ಸರಬರಾಜು ಆದೇಶದನ್ವಯ ಸಮವಸ್ತ್ರ ಬಟ್ಟೆಗಳನ್ನು ಪೂರೈಸಲಾಗುತ್ತಿದೆ.</td></tr>
</table>

ಸಂ: ವಾಕೈ 257 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)

ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 724
ಸದಸ್ಯರ ಹೆಸರು : ಶ್ರೀ ಸೋಮನಗೌಡ ಬಿ. ಪಾಟೀಲ್ (ಸಾಸನೂರು) (ದೇವರ ಹಿಪ್ಪರಗಿ)
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ದೇವರಹಿಪ್ಪರಗಿ ಪಟ್ಟಣದಲ್ಲಿ ಬಸ್ ಡಿಪೋವನ್ನು ಯಾವಾಗ ಪ್ರಾರಂಭಿಸಲಾಗುವುದು; ಬಸ್ ಡಿಪೋ ನಿರ್ಮಾಣಕ್ಕೆ ಸರ್ಕಾರಿ ಜಮೀನು ಲಭ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಜಯಪುರ ಜಿಲ್ಲೆಯ ದೇವರಹಿಪ್ಪರಗಿ ನೂತನ ತಾಲ್ಲೂಕು ಕೇಂದ್ರವಾಗಿರುತ್ತದೆ.<br><br>ಹೊಸ ಬಸ್ ಘಟಕ ನಿರ್ಮಿಸುವುದಕ್ಕೆ ಸಂಸ್ಥೆಯ ನಿಯಮಾವಳಿಯಂತೆ 40 ರಿಂದ 50 ಕಿ.ಮೀ ಅಂತರದಲ್ಲಿರುವ ಪಕ್ಕದ ಘಟಕದ ಅನುಸೂಚಿಗಳ ಸಂಖ್ಯೆ 125ಕ್ಕಿಂತಲೂ ಹೆಚ್ಚಾಗಬೇಕಿರುತ್ತದೆ.<br><br>ದೇವರಹಿಪ್ಪರಗಿ ಪಟ್ಟಣದಿಂದ 40 ಕಿಮೀ ಅಂತರದಲ್ಲಿರುವ ವಿಜಯಪುರ ಘಟಕ-1, ಘಟಕ-2 ಮತ್ತು ಘಟಕ-3ಗಳು ಕ್ರಮವಾಗಿ 101, 82, 63 ಅನುಸೂಚಿಗಳೊಂದಿಗೆ, 23 ಕಿ.ಮೀ ಅಂತರದಲ್ಲಿರುವ ಸಿಂದಗಿ ಘಟಕ 101 ಅನುಸೂಚಿಗಳೊಂದಿಗೆ, 47 ಕಿ.ಮೀ. ಅಂತರದಲ್ಲಿರುವ ಇಂಡಿ ಘಟಕ 104 ಅನುಸೂಚಿಗಳೊಂದಿಗೆ, 45 ಕಿ.ಮೀ. ಅಂತರದಲ್ಲಿರುವ ಬಸವನಬಾಗೇವಾಡಿ ಘಟಕ 69 ಅನುಸೂಚಿಗಳೊಂದಿಗೆ ಹಾಗೂ 55 ಕಿ.ಮೀ. ಅಂತರದಲ್ಲಿರುವ ತಾಳಿಕೋಟೆ ಘಟಕ 77 ಅನುಸೂಚಿಗಳೊಂದಿಗೆ ಕಾರ್ಯಾಚರಣೆಗೊಳಿಸಲಾಗುತ್ತಿದೆ.<br><br>ಸದರಿ ಘಟಕಗಳ ಅನುಸೂಚಿಗಳು 125ಕ್ಕಿಂತಲು ಹೆಚ್ಚಾದ ನಂತರ ದೇವರಹಿಪ್ಪರಗಿ ಪಟ್ಟಣದಲ್ಲಿ ಹೊಸ ಘಟಕದ ಪ್ರಸ್ತಾವನೆಯ ಬಗ್ಗೆ ಪರಿಶೀಲಿಸಬೇಕಿರುತ್ತದೆ.<br><br>ಪ್ರಸ್ತುತ ಪಟ್ಟಣದಲ್ಲಿ ಬಸ್ ಘಟಕ ನಿರ್ಮಿಸಲು ಸಂಸ್ಥೆಯ ಹೆಸರಿನಲ್ಲಿ ನಿವೇಶನ ಇರುವುದಿಲ್ಲ ಹಾಗೂ ಪ್ರಸ್ತುತ ಹಂತದಲ್ಲಿ ಸಂಸ್ಥೆಯ ಆರ್ಥಿಕ ಹಿತದೃಷ್ಟಿಯಿಂದ ದೇವರಹಿಪ್ಪರಗಿ ಪಟ್ಟಣದಲ್ಲಿ ಬಸ್ ಘಟಕ ನಿರ್ಮಾಣ ಮಾಡುವುದು ಸೂಕ್ತವಾಗಿರುವುದಿಲ್ಲ. |
| ಆ. | ಬಂದಿದ್ದಲ್ಲಿ, ಜಮೀನನ್ನು ವಶಕ್ಕೆ ಪಡೆದು ಬಸ್ ಡಿಪೋವನ್ನು ನಿರ್ಮಿಸಲು ಯಾವಾಗ ಮಂಜೂರು ಮಾಡಲಾಗುವುದು; ಇದಕ್ಕೆ ಬೇಕಾಗುವ ಕಾಲಮಿತಿ ಎಷ್ಟು? (ವಿವರ ನೀಡುವುದು) | |

ಸಂಖ್ಯೆ: ಟಿಡಿ 248 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | :: | 854 |
| ಸದಸ್ಯರ ಹೆಸರು | :: | ಶ್ರೀ ಹರೀಶ್ ಪೂಂಜ(ಬೆಳ್ತಂಗಡಿ) |
| ಉತ್ತರಿಸುವ ದಿನಾಂಕ | :: | 09.12.2020 |
| ಉತ್ತರಿಸುವ ಸಚಿವರು | :: | ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ). | ಪಶುಸಂಗೋಪನಾ ಇಲಾಖೆಯಲ್ಲಿರುವ ಡಿ-ದರ್ಜೆ ಹುದ್ದೆಗಳೆಷ್ಟು; ಎಷ್ಟು ಹುದ್ದೆಗಳು ಖಾಲಿ ಇವೆ; ಖಾಲಿಯಿರುವ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದಲ್ಲಿ ಬಾಹ್ಯ ಮೂಲಗಳಿಂದ ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲಾಗಿದೆ; (ವಿವರ ನೀಡುವುದು) | ಪಶುಸಂಗೋಪನಾ ಇಲಾಖೆಯಲ್ಲಿ ಮಂಜೂರಾದ 'ಡಿ' ದರ್ಜೆ ಹುದ್ದೆಯ ವಿವರ ಈ ಕೆಳಕಂಡಂತಿದೆ.<br><br>ಮಂಜೂರು: 7363; ಭರ್ತಿ: 2130; ಖಾಲಿ: 5233<br><br>ಖಾಲಿ ಇರುವ ಹುದ್ದೆಗಳಿಗೆ ಎದುರಾಗಿ 2256 'ಡಿ' ದರ್ಜೆ ಹುದ್ದೆಗಳನ್ನು ಹೊರಗುತ್ತಿಗೆ ಸಂಸ್ಥೆಗಳ ಮೂಲ ಸೇವೆ ಪಡೆಯಲಾಗಿದೆ. |
| ಆ). | ಈ ಇಲಾಖೆಯಲ್ಲಿ ಜಾನುವಾರು ಚಿಕಿತ್ಸಾ ಕೇಂದ್ರಗಳಲ್ಲಿ ಜಾನುವಾರು ನಿರ್ವಹಣೆ ಮರಣೋತ್ತರ ಪರೀಕ್ಷಾ ಸಂದರ್ಭಗಳಲ್ಲಿ ಪಶುವೈದ್ಯರುಗಳಿಗೆ ಅತಿ ಅವಶ್ಯಕವಾಗಿರುವ ಡಿ-ದರ್ಜೆ ನೌಕರರ ಹೊರಗುತ್ತಿಗೆ ನೌಕರರ ನೇಮಕಾತಿ ಸಂದರ್ಭದಲ್ಲಿ ನೀಡುವ ಜಾತಿವಾರು ಮೀಸಲಾತಿ ಸಂಪೂರ್ಣ ವಿವರ ನೀಡುವುದು; | ಇಲಾಖೆಯಲ್ಲಿನ 'ಡಿ' ದರ್ಜೆ ಹುದ್ದೆಗಳ ಸೇವೆಯನು ಹೊರಗುತ್ತಿಗೆ ಮಾನವ ಸಂಪನ್ಮೂಲ ಸೇವಾ ಸಂಸ್ಥೆಗಳಿಂದ ಪಡೆದು. ಸ್ಥಳಿಯರನ್ನು ಹೊರಗುತ್ತಿ ಆಧಾರದ ಮೇಲೆ 'ಡಿ' ದರ್ಜೆ ಹುದ್ದೆ ನೇಮಿಸುತ್ತಿರುವುದರಿಂದ ಜಾತಿವಾರು ಮೀಸಲಾತಿಯ ಇರುವುದಿಲ್ಲ. |

ಸಂಖ್ಯೆ: ಪಸಂಮೀ ಇ-263 ಪಅಸೇ 2020

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು

**ಕರ್ನಾಟಕ ಸರ್ಕಾರ**

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ
ಚುಕ್ಕೆ ಗುರುತಿಲ್ಲದ ಪ್ರಶ್ನೆ : 856
ಉತ್ತರಿಸಬೇಕಾದ ದಿನಾಂಕ : 09.12.2020

| ಕ್ರ.ಸಂ. | ಪ್ರಶ್ನೆ | ಉತ್ತರ |
| --- | --- | --- |
| ಅ) | ರಾಜ್ಯ ಸಹಕಾರಿ ಸಂಘಗಳಲ್ಲಿ ವಿದ್ಯಾರ್ಹತೆ ಹೊಂದಿದ ಅಂಗವಿಕಲ ಅಭ್ಯರ್ಥಿಗಳಿಗೆ ಮಾನವೀಯತೆ ನೆಲೆಯಲ್ಲಿ ನೌಕರಿ ಕಡ್ಡಾಯವಾಗಿ ಮೀಸಲಾತಿ ನೀಡಿ, ಉದ್ಯೋಗ ನೀಡುವ ಬಗ್ಗೆ ಆದೇಶ ಮಾಡುವಲ್ಲಿ ಸರ್ಕಾರದ ನಿಲುವೇನು? | ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾತಿ ಕುರಿತು ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಸುತ್ತೋಲೆ ಸಂಖ್ಯೆ:ಸಿಆಸುಇ/235/ಸೆನೆನಿ/2012, ದಿನಾಂಕ:27.11.2012ನ್ನು ಯಥಾವತ್ತಾಗಿ ಅನುಷ್ಠಾನಗೊಳಿಸಲು ಕ್ರಮ ಜರುಗಿಸಲಾಗಿದೆ. |

ಕಡತ ಸಂಖ್ಯೆ: ಸಿಒ 102 ಪಿಎಂಸಿ 2020

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 857
ಮಾನ್ಯ ವಿಧಾನಸಭೆ ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ
ಉತ್ತರಿಸಬೇಕಾದ ದಿನಾಂಕ : 09.12.2020
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಒಂದು ಕಾಲು ಅಥವಾ ಒಂದು ಕೈಯನ್ನು ಕಳೆದುಕೊಂಡಿರುವವರಿಗೆ ಶೇಕಡ 75 ರಷ್ಟು ಅಂಗವಿಕಲ ಪ್ರಮಾಣ ಪತ್ರ ನೀಡುವ ಬಗ್ಗೆ ಸರ್ಕಾರದ ನಿಲುವೇನು; | ಅಂಗವಿಕಲರಿಗೆ ಅಂಗವಿಕಲತೆಯ ಪ್ರಮಾಣವನ್ನು ನಿಗದಿ ಪಡಿಸಲು ಕೇಂದ್ರ ಸರ್ಕಾರದ ಅಧಿಸೂಚನೆ ದಿನಾಂಕ:4.01.2018ರಂತೆ ಹೊರಡಿಸಿರುವ ಮಾರ್ಗಸೂಚಿ ಯನ್ವಯ ಜಿಲ್ಲಾ ಹಾಗೂ ತಾಲ್ಲೂಕು ಆಸ್ಪತ್ರೆಗಳಲ್ಲಿ ವೈದ್ಯಕೀಯ ಪ್ರಾಧಿಕಾರದಡಿ ಅಂಗವಿಕಲತೆಯ ಪ್ರಮಾಣವನ್ನು ಆಧರಿಸಿ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲಾಗುತ್ತಿದೆ. |
| ಆ) | ಸರ್ಕಾರದ ಕೆಲವು ಯೋಜನೆಗಳಡಿ ಸವಲತ್ತು ಪಡೆಯಲು ಶೇಕಡ 75 ರಷ್ಟು ಅಂಗವಿಕಲತೆ ಹೊಂದಿರಬೇಕಾಗಿರುವುದರಿಂದ ಅವರು ಕೆಲಸ ಮಾಡಲು ಸಂಪೂರ್ಣ ಆಶಕ್ತರಾದರೂ ಸರ್ಕಾರದ ಸವಲತ್ತು ಪಡೆಯಲು ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ತೀವ್ರತರನಾದ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ಮತ್ತು ಪ್ರಸ್ತುತ ನೀಡುತ್ತಿರುವ ರೂ.1400/-ಗಳ ಮಾಸಿಕ ಪೋಷಣಾ ಭತ್ಯೆ ಪಡೆಯಲು ಮಾತ್ರ ಶೇ.75 ರಷ್ಟು ಅಂಗವಿಕಲತೆಯ ಪ್ರಮಾಣ ಪತ್ರವನ್ನು ನಿಗದಿಪಡಿಸಲಾಗಿರುತ್ತದೆ. ಉಳಿದಂತೆ ವೈದ್ಯಕೀಯ ಪ್ರಾಧಿಕಾರದ ಮೂಲಕ ನೀಡಲಾಗುವ ಅಂಗವಿಕಲತೆಯ ಪ್ರಮಾಣ ಪತ್ರವನ್ನು ಆಧರಿಸಿ ಆಯಾ ಯೋಜನೆಗಳ ಮಾರ್ಗಸೂಚಿಯನುಸಾರ ಸವಲತ್ತುಗಳನ್ನು ನೀಡಲಾಗುತ್ತಿದೆ. ಅವರು ಕೆಲಸ ಮಾಡಲು ಸಂಪೂರ್ಣ ಆಶಕ್ತರಾದರೂ ಸರ್ಕಾರದ ಸವಲತ್ತು ಪಡೆಯಲು ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಸೂಕ್ತ ಕ್ರಮ ವಹಿಸುವುದೇ? | ಸರ್ಕಾರದಿಂದ ಅರ್ಹ ಸೌಲಭ್ಯಗಳನ್ನು ನೀಡಲು ಕ್ರಮವಹಿಸಲಾಗುತ್ತದೆ. |

**ಸಂಖ್ಯೆ: ಮಮಇ 290 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ
ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 866

ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ಜಿಲ್ಲೆ ಬೈಲಹೊಂಗಲ ಪಟ್ಟಣದಲ್ಲಿ ನೂತನವಾಗಿ ಬಸ್ ನಿಲ್ದಾಣ ಕಟ್ಟಡವನ್ನು ನಿರ್ಮಿಸುತ್ತಿರುವುದು ನಿಜವೇ? | ಬೆಳಗಾವಿ ಜಿಲ್ಲೆ ಬೈಲಹೊಂಗಲ ಪಟ್ಟಣದಲ್ಲಿ ನೂತನವಾಗಿ ಬಸ್ ನಿಲ್ದಾಣ ಕಟ್ಟಡವನ್ನು ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನದಡಿ ನಿರ್ಮಿಸಲಾಗುತ್ತಿದೆ. |
| ಆ. | ಸದರಿ ಬಸ್ ನಿಲ್ದಾಣದಲ್ಲಿ ಕಾಂಕ್ರೀಟ್ ರಸ್ತೆಯ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಿರ್ಮಾಣ ಹಂತದಲ್ಲಿರುವ ಸದರಿ ಕಾಮಗಾರಿಯಲ್ಲಿ ಕಾಂಕ್ರೀಟ್ ರಸ್ತೆಯ ಪ್ರಸ್ತಾವನೆಯು ಒಳಗೊಂಡಿರುವುದಿಲ್ಲ. |
| ಇ. | ಬಂದಿದ್ದಲ್ಲಿ, ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ಬಸ್ ನಿಲ್ದಾಣದಲ್ಲಿ ಕಾಂಕ್ರೀಟ್ ರಸ್ತೆ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದೇ? | ಆದರೆ, ಕಾಂಕ್ರೀಟ್ ರಸ್ತೆ ಮಾಡುವುದು ಅವಶ್ಯಕವಾಗಿದ್ದು, ಸದರಿ ಕೆಲಸವನ್ನು ಮುಂಬರುವ ಆರ್ಥಿಕ ವರ್ಷದ ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಂಡು ಕಾಮಗಾರಿಯನ್ನು ಕೈಗೊಳ್ಳಲಾಗುವುದು. |

ಸಂಖ್ಯೆ: ಟಿಡಿ 249 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 867
ಸದಸ್ಯರ ಹೆಸರು : ಶ್ರೀ ಮಹೇಶ್ ಎನ್. (ಕೊಳ್ಳೇಗಾಲ)
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕೊಳ್ಳೆಗಾಲ ನಗರದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ (ಕೆ.ಎಸ್.ಆರ್.ಟಿ.ಸಿ) ಬಸ್ ನಿಲ್ದಾಣದ ಕಾಮಗಾರಿ ಕೆಲವು ವರ್ಷಗಳ ಹಿಂದೆಯೇ ಪ್ರಾರಂಭವಾಗಿ ಇನ್ನೂ ಅನುಷ್ಠಾನ ಹಂತದಲ್ಲಿಯೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ವರ್ಷಗಟ್ಟಲೆ ಕಾಮಗಾರಿ ನಡೆಯುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿದ್ದು, ಈ ಬಸ್ ನಿಲ್ದಾಣ ಸುಸಜ್ಜಿತವಾಗಿ ರೂಪುಗೊಳ್ಳಲು ಇನ್ನೂ ಹೆಚ್ಚಿನ ಅನುದಾನ ಅಗತ್ಯವಿರುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; | ಕ.ರಾ.ರ.ಸಾ.ನಿಗಮವು ಕೊಳ್ಳೇಗಾಲ ಪಟ್ಟಣದಲ್ಲಿ ನಗರ ಸಭೆ, ಕೊಳ್ಳೇಗಾಲ ಮತ್ತು ಡಲ್ಟ್ ಸಹಯೋಗದೊಂದಿಗೆ ಮೊದಲನೇ ಹಂತದಲ್ಲಿ ರೂ.1133.00 ಲಕ್ಷಗಳಿಗೆ ಟೆಂಡರ್ ಪ್ರಕ್ರಿಯೆ ಮುಖಾಂತರ ಬಸ್ ನಿಲ್ದಾಣ ಕಾಮಗಾರಿಯನ್ನು ದಿನಾಂಕ: 20-02-2018ರಂದು ಪ್ರಾರಂಭಿಸಿದ್ದು, ಕಾಮಗಾರಿ ಪೂರ್ಣಗೊಳ್ಳುವ ಹಂತದಲ್ಲಿರುತ್ತದೆ.<br>2ನೇ ಹಂತದಲ್ಲಿ ರೂ.1084.00 ಲಕ್ಷಗಳಿಗೆ ಟೆಂಡರ್ ಪ್ರಕ್ರಿಯೆ ಮುಖಾಂತರ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಇ. | ಸದರಿ ಬಸ್ ನಿಲ್ದಾಣದ ಕಾಮಗಾರಿಯ ಒಟ್ಟು ಅಂದಾಜು ಮೊತ್ತ ರೂ.20 ಕೋಟಿಗಳಲ್ಲಿ ಇಲ್ಲಿಯವರೆಗೆ 11 ಕೋಟಿ ರೂಪಾಯಿಗಳು ಖರ್ಚಾಗಿದ್ದು ಉಳಿಕೆ 09 ಕೋಟಿ ರೂಪಾಯಿಗಳು ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಈ. | ನಾಡಿನ ಪ್ರಸಿದ್ದ ಯಾತ್ರಾ ಸ್ಥಳಗಳಾದ ಮಲೆ ಮಹದೇಶ್ವರ ಬೆಟ್ಟ, ಶ್ರೀ ಬಿಳಿಗಿರಿ ರಂಗನ ಬೆಟ್ಟಗಳಿಗೆ ಸಂಪರ್ಕ ಕಲ್ಪಿಸುವ ಪ್ರಮುಖ ಬಸ್ ನಿಲ್ದಾಣ ಈ ವರ್ಷವೇ ಜನರ ಸೇವೆಗೆ ಸಿಗುವಂತಾಗಲು ಉಳಿಕೆ 09 ಕೋಟಿ ರೂ.ಗಳನ್ನು ಈ ಸಾಲಿನಲ್ಲಿಯೇ ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ನಗರಸಭೆ, ಕೊಳ್ಳೇಗಾಲ ಹಾಗೂ ಡಲ್ಟ್‌ಗೆ ಉಳಿಕೆ ಮೊತ್ತವನ್ನು ಬಿಡುಗಡೆ ಮಾಡಲು ಪತ್ರ ಬರೆಯಲಾಗಿದ್ದು, ಹಣ ಬಿಡುಗಡೆಯಾದ ನಂತರ ಕ್ರಮ ವಹಿಸಲಾಗುವುದು. |

ಸಂಖ್ಯೆ: ಟಿಡಿ 250 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

**ಕರ್ನಾಟಕ ವಿಧಾನ ಸಭೆ**
**15ನೇ ವಿಧಾನ ಸಭೆ 8ನೇ ಅಧಿವೇಶನ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 871
ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಇ-ಸ್ವತ್ತು ತಂತ್ರಾಂಶದ ಮೂಲಕ ಗ್ರಾಮ ಪಂಚಾಯಿತಿಗಳಲ್ಲಿ 11'ಬಿ' ಮೂಲಕ ಖಾತಾ ವಿತರಿಸುತ್ತಿದ್ದು, 11'ಬಿ' ಆಸ್ತಿಗಳನ್ನು ಮಾರಾಟ ಅಥವಾ ಕುಟುಂಬದೊಳಗೆ ಪಾಲು ಪಟ್ಟಿ ಮಾಡಿ ನೊಂದಣಿ ಇಲಾಖೆಯಲ್ಲಿ ನೋಂದಾಯಿಸಿದ ಆಸ್ತಿಗಳನ್ನು ಖಾತ ಬದಲಾವಣೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೇಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಇದನ್ನು ಸರಿಪಡಿಸಲು ಕೈಗೊಂಡ ಕ್ರಮಗಳೇನು; | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ಧವಲ್ಲದ ಆಸ್ತಿಗಳಿಗೆ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-11ಬಿಯನ್ನು ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ವಿತರಿಸುತ್ತಿದ್ದು, ಇ-ಸ್ವತ್ತು ತಂತ್ರಾಂಶದಲ್ಲಿ ಮಾರಾಟಕ್ಕೆ ಅರ್ಹವಾದ ನಮೂನೆ-11ಬಿ ಪ್ರಕರಣದಲ್ಲಿ ತೆರಿಗೆ ನಿರ್ಧರಣೆ ಪಟ್ಟಿ ಮಾಡಲು ಮತ್ತು ಮಾರಾಟಕ್ಕೆ ಅರ್ಹವಲ್ಲದ ಪ್ರಕರಣಗಳಲ್ಲಿ ಕುಟುಂಬದೊಳಗೆ ವಿಭಾಗ ಮಾಡಿಕೊಂಡಲ್ಲಿ ತೆರಿಗೆ ನಿರ್ಧರಣೆ ಪಟ್ಟಿ ಮಾಡಲು ಅವಕಾಶ ಕಲ್ಪಿಸಲಾಗಿದೆ. |
| (ಇ) | ಇ-ಸ್ವತ್ತು ತಂತ್ರಾಂಶದ ಮೂಲಕ ಗ್ರಾಮ ಪಂಚಾಯಿತಿಗಳಿಂದ ಪಡೆದು 11'ಬಿ' ಯನ್ನು ಕಾವೇರಿ ತಂತ್ರಾಂಶದ ಮೂಲಕ ನೋಂದಾವಣಿ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಈ) | ಬಂದಿದ್ದಲ್ಲಿ, ಇದನ್ನು ಸರಿಪಡಿಸಲು ಕೈಗೊಂಡ ಕ್ರಮಗಳೇನು? | ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ಕ್ರಮಬದ್ಧವಲ್ಲದ ಆಸ್ತಿಗಳಿಗೆ ಸಂಬಂಧಿಸಿದಂತೆ ಇ-ಸ್ವತ್ತು ತಂತ್ರಾಂಶದ ಮೂಲಕ ವಿತರಿಸುವ ನಮೂನೆ-11ಬಿ ಅನ್ನು ಆಧರಿಸಿ ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಾಯಿಸಲು ಈಗಾಗಲೇ ಎಲ್ಲಾ ಉಪನೋಂದಣಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br><br>ಮುಂದುವರೆದು, ಉತ್ತರ ಕನ್ನಡ, ದಕ್ಷಿಣ ಕನ್ನಡ, ಉಡುಪಿ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ನಮೂನೆ 11ಬಿ ಯನ್ನು ಇ-ಸ್ವತ್ತು ತಂತ್ರಾಂಶದ ಮೂಲಕ ವಿತರಿಸುವುದಕ್ಕೆ ಬದಲಾಗಿ ಕೈಬರಹದ ಮೂಲಕ ವಿತರಿಸಲು ವಿನಾಯಿತಿ ನೀಡಲಾಗಿದೆ. |

ಸಂ. ಗ್ರಾಅಪ 857 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 873 |
| ವಿಧಾನ ಪರಿಷತ್ ಸದಸ್ಯರು | : | ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ) |
| ಉತ್ತರಿಸುವ ದಿನಾಂಕ | : | 09.12.2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಹಾಲು ಸಂಸ್ಕರಣಾ ಘಟಕಗಳೆಷ್ಟು; (ವಿವರ ನೀಡುವುದು) | ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಬೀರೂರು ಇಲ್ಲಿನ ಹಾಸನ ಹಾಲು ಒಕ್ಕೂಟವು, ಹಾಲು ಶೀತಲೀಕರಣ ಕೇಂದ್ರವನ್ನು ಸ್ಥಾಪಿಸಿದ್ದು, ಪ್ರಸ್ತುತ ದಿನವಹಿ 70000 ಕೆ.ಜಿ. ಹಾಲನ್ನು ಸಂಗ್ರಹಿಸಿ ಮತ್ತು ಶೈತ್ಯೀಕರಿಸಿ, ಹಾಸನ ಮುಖ್ಯ ಡೈರಿಗೆ ಸರಬರಾಜು ಮಾಡಲಾಗುತ್ತಿದೆ. |
| ಆ | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಹಾಲು ಸಂಸ್ಕರಣಾ ಘಟಕ ಸ್ಥಾಪನೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ |
| ಇ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಈ ಬೇಡಿಕೆಯನ್ನು ಈಡೇರಿಸಲು ಸರ್ಕಾರ ಕ್ರಮ ಕೈಗೊಳ್ಳುವುದು? (ವಿವರ ನೀಡುವುದು) | ಉದ್ಭವಿಸುವುದಿಲ್ಲ |

**ಪಸಂಮೀ ಇ-298 ಸಲೆವಿ 2020**

**(ಪ್ರಭು ಬಿ. ಚವ್ಹಾಣ್)**
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 874 |
| ಸದಸ್ಯರ ಹೆಸರು | ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) |
| ಉತ್ತರಿಸಬೇಕಾದ ದಿನಾಂಕ | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಕರ್ನಾಟಕ ಭೂಸೇನಾ ನಿಗಮ ನಿಯಮಿತ (Karnataka Land Army Corporation) ರವರಿಗೆ ಕಾಮಗಾರಿ ಕೈಗೊಳ್ಳಲು ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡುವ ಪ್ರಸ್ತಾವನೆ ಸರ್ಕಾರದಮುಂದಿದೆಯೇ; | ಕೆಆರ್‌ಐಡಿಎಲ್ ಸಂಸ್ಥೆಗೆ 2020-2021ನೇ ಸಾಲಿಗೆ ಅನ್ವಯವಾಗುವಂತೆ ಕೆಟಿಪಿಪಿ ಸೆಕ್ಷನ್ 4(ಜಿ) ರಡಿಯಲ್ಲಿ ವಿನಾಯಿತಿ ನೀಡುವ ಕುರಿತು ಘನ ಉಚ್ಛ ನ್ಯಾಯಾಲಯವು ನೀಡಿರುವ ಮಧ್ಯಂತರ ತೀರ್ಪಿನಂತೆ ಕ್ರಮ ಕೈಗೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆ. |
| ಆ. | ಇಲ್ಲದಿದ್ದಲ್ಲಿ, ವಿನಾಯಿತಿ ನೀಡಲು ಇರುವ ತೊಡಕುಗಳೇನು; (ವಿವರ ನೀಡುವುದು) | ಘನ ಉಚ್ಛ ನ್ಯಾಯಾಲಯವು ನೀಡಿರುವ ಮಧ್ಯಂತರ ತೀರ್ಪಿನಂತೆ ಕೆ.ಆರ್.ಐ.ಡಿ.ಎಲ್. ಸಂಸ್ಥೆಗೆ ಸಾಮಾನ್ಯವಾಗಿ ಅನ್ವಯವಾಗುವಂತೆ 4 (ಜಿ) ವಿನಾಯಿತಿ ನೀಡಲು ಸಾಧ್ಯವಿರುವುದಿಲ್ಲ.<br>ನಿರ್ದಿಷ್ಟ ಸಂಗ್ರಹಣೆ (Specific Procurement) ಗೆ ಮಾತ್ರ 4 (ಜಿ) ವಿನಾಯಿತಿ ಕೊಡಬಹುದೆಂದು ಸೂಚಿಸಿರುವ ನ್ಯಾಯಾಲಯದ ತೀರ್ಪಿನ ಹಿನ್ನಲೆಯಲ್ಲಿ ಈ ಬಗ್ಗೆ ಸರ್ಕಾರ ಪರಿಶೀಲಿಸಿ ಕ್ರಮ ಜರುಗಿಸಬೇಕಿದೆ. |
| ಇ. | ಯಾವ ಕಾಲಮಿತಿಯೊಳಗೆ ಈ ಬೇಡಿಕೆಯನ್ನು ಈಡೇರಿಸಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದು; | |
| ಈ. | ಏಜೆನ್ಸಿಗಳ ಹೊರತಾಗಿ ಮಳೆಹಾನಿಗೊಳಗಾದ ಪ್ರದೇಶಗಳಲ್ಲಿ ತುರ್ತು ಕಾಮಗಾರಿ ಕೈಗೊಳ್ಳಲು ಸರ್ಕಾರ ಕೈಗೊಂಡಿರುವ ಮಾರ್ಗೋಪಾಯಗಳೇನು? (ವಿವರ ನೀಡುವುದು) | ಕೆ.ಆರ್.ಐ.ಡಿ.ಎಲ್. ಸಂಸ್ಥೆಯ ಹೊರತಾಗಿ ಮಳೆಹಾನಿ ಪ್ರದೇಶದಲ್ಲಿ ರಸ್ತೆ ಮತ್ತು ಸೇತುವೆಗಳ ದುರಸ್ತಿ ಕಾಮಗಾರಿಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ<br>• ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಹಾಗೂ<br>• ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ಮೂಲಕ ಅನುಷ್ಠಾನ ಮಾಡಲಾಗುತ್ತಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-08/29:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **875** |
| ಉತ್ತರಿಸಬೇಕಾದ ದಿನಾಂಕ | : | 09.12.2020 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ಒಂದು ವರ್ಷದಿಂದ ಸಾರ್ವಜನಿಕರು ಆನ್ ಲೈನ್ ಮೂಲಕ ಅರ್ಜಿ ಸಲ್ಲಿಸಲು ಸಾಧ್ಯವಾಗುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ 2011 ಆರ್ಥಿಕ ಜಾತಿ ಜನಗಣತಿಯಲ್ಲಿ ಕೈಬಿಟ್ಟು ಹೋದ ವಸತಿ ಮತ್ತು ನಿವೇಶನ ರಹಿತರನ್ನು ಗುರುತಿಸಲು ಕೇಂದ್ರ ಸರ್ಕಾರದ ನಿರ್ದೇಶನದಂತೆ ವಸತಿ ಮತ್ತು ನಿವೇಶನ ರಹಿತರನ್ನು ಗುರುತಿಸುವ ಕಾರ್ಯವನ್ನು ನಡೆಸಲಾಗಿರುತ್ತದೆ ಈ ಸಂಬಂಧ ಕೇಂದ್ರ ಸರ್ಕಾರವು ಸುತ್ತೋಲೆ ಹೊರಡಿಸಲಾಗಿರುತ್ತದೆ. ಈ ಸಂಬಂಧ ನಿಗಮವು ವಸತಿ ಮತ್ತು ನಿವೇಶನ ರಹಿತರನ್ನು ಗುರುತಿಸಿ ನಿಗಮದ ವೆಬ್ ಸೈಟಿನಲ್ಲಿ ನಮೂದಿಸಲು ರಾಜ್ಯದ ಎಲ್ಲಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತಿಗಳಿಗೆ ಪತ್ರದ ಮೂಲಕ ತಿಳಿಸಲಾಗಿರುತ್ತದೆ. ಅಲ್ಲದೇ, ಈ ಕಾರ್ಯಕ್ಕಾಗಿ ವ್ಯಾಪಕ ಪ್ರಚಾರ ಕೈಗೊಂಡು ಸಮೀಕ್ಷೆಯನ್ನು ಯಶಸ್ವಿಯಾಗಿ ನಡೆಸಲು ನಿರ್ದೇಶನ ನೀಡಲಾಗಿರುತ್ತದೆ. ಸರ್ಕಾರದ ಸುತ್ತೋಲೆಯಲ್ಲಿ ಮುಂಬರುವ ವಿವಿಧ ವಸತಿ ಯೋಜನೆಯಡಿ ಈ ಸಮೀಕ್ಷೆಯ ಪಟ್ಟಿಯಲ್ಲಿರುವವರನ್ನೇ ಆಯ್ಕೆ ಮಾಡಲು ತಿಳಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ ಎಲ್ಲಾ ವಸತಿ ರಹಿತರ ಹಾಗೂ ನಿವೇಶನ ರಹಿತರಲ್ಲಿ ಅರ್ಹರು ಕೈಬಿಡದಂತೆ ಗುರುತಿಸಿ, ಅಗತ್ಯ ದಾಖಲೆಗಳನ್ನು ಹಾಗೂ ವಿವರಗಳನ್ನು ಪಡೆದು, ನಿಗಮದ ವೆಬ್ ಸೈಟಿನಲ್ಲಿ ನಮೂದಿಸುವಂತೆ ನಿಗಮದಿಂದ ಅನೇಕ ಪತ್ರಗಳ ಮೂಲಕ ಹಾಗೂ ವೀಡಿಯೋ ಕಾನ್ಫರೆನ್ಸ್ ಮೂಲಕ ಸಹ ತಿಳಿಸಲಾಗಿರುತ್ತದೆ. ಕೇಂದ್ರ ಸರ್ಕಾರದಿಂದ ನೀಡಲಾದ ಕಾಲಾವಧಿ ಮುಕ್ತಾಯವಾಗಿದ್ದರಿಂದ ಈ ಹಂತದಲ್ಲಿ ಹೊಸದಾಗಿ ಸೇರಿಸಲು ಪ್ರಸ್ತುತ ಅವಕಾಶವಿರುವುದಿಲ್ಲ. ಆದರೆ, ನಿವೇಶನ ರಹಿತರನ್ನು ಸೇರಿಸಲು ಬಾಕಿ ಉಳಿದಿದ್ದರಿಂದ ಕಾಲಾವಕಾಶವನ್ನು ಕೋರಿ ಜಿಲ್ಲಾ ಪಂಚಾಯಿತಿಗಳಿಂದ ನಿಗಮಕ್ಕೆ ಪತ್ರ ರವಾನಿಕೆಯಾಗಿದ್ದರಿಂದ, ನಿವೇಶನ ರಹಿತರನ್ನು ಸೇರಿಸಲು ಸರ್ಕಾರದ ಅನುಮೋದನೆ ಪಡೆದು ಕೈ ಬಿಟ್ಟು ಹೋದ ನಿವೇಶನ ರಹಿತರನ್ನುದಿನಾಂಕ: 10.03.2020 ರಿಂದ 31.08.2020 ರವರೆಗೆ ಅಂತಿಮ ಕಾಲಾವಕಾಶವನ್ನುನೀಡಲಾಗಿರುತ್ತದೆ. |
| (ಆ) | ಬಂದಿದ್ದಲ್ಲಿ ಸರ್ಕಾರ ಸಮಸ್ಯೆ ಇತ್ಯರ್ಥಕ್ಕೆ ಕೈಗೊಂಡಿರುವ ಕ್ರಮಗಳೇನು ? (ವಿವರ ನೀಡುವುದು) | |
| (ಇ) | ಈ ಯೋಜನೆಯಡಿ ಫಲಾನುಭವಿಗಳ ಆದಾಯ ಮಿತಿ ರೂ.32,000/- ಗಳನ್ನು ನಿಗದಿಪಡಿಸಿರುವುದನ್ನು ಮಾರ್ಪಡಿಸಿ ಆದಾಯ ಮಿತಿಯನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಆದಾಯ ಮಿತಿ ಹೆಚ್ಚಿಸುವ ಬಗ್ಗೆ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |
| (ಈ) | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಪ್ರಸ್ತಾವನೆಯನ್ನು ಸಾಕಾರಗೊಳಿಸಲಾಗುವುದು ? | |

ಸಂಖ್ಯೆ :ವಇ 404 ಹೆಚ್‌ಎಎಂ 2020

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 876 |
| **ಸದಸ್ಯರ ಹೆಸರು** | ಶ್ರೀ ಟಿ.ಡಿ ರಾಜೇಗೌಡ (ಶೃಂಗೇರಿ) |
| **ಉತ್ತರಿಸಬೇಕಾದ ದಿನಾಂಕ** | 09-12-2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | 2018-19ನೇ ಸಾಲಿನ ಲೆ.ಶೀ: 3054-80-196-1-03-300 ಲಮ್‌ಸಮ್ ಅಡಿಯಲ್ಲಿ ಶೃಂಗೇರಿ ವಿಧಾನಸಭಾ ಕ್ಷೇತ್ರದ ಗ್ರಾಮೀಣ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಮಂಜೂರಾಗಿದ್ದ ರೂ. 3.00 ಕೋಟಿ ಅನುದಾನವನ್ನು ತಡೆ ಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | 2018-19ನೇ ಸಾಲಿನ ಲೆ.ಶೀ: 3054-80-196-1-03-300 ಲಮ್‌ಸಮ್ ಅಡಿಯಲ್ಲಿ ಶೃಂಗೇರಿ ವಿಧಾನಸಭಾ ಕ್ಷೇತ್ರದ ಮಂಜೂರಾಗಿದ್ದ ರೂ. 3.00 ಕೋಟಿಗಳ ಮೊತ್ತದ ರಸ್ತೆ ಕಾಮಗಾರಿಗಳನ್ನು ತಡೆಹಿಡಿದಿರುವುದಿಲ್ಲ. |
| ಆ. | ಬಂದಿದ್ದಲ್ಲಿ, ತಡೆಹಿಡಿದಿರುವ ಅನುದಾನವನ್ನು ಯಾವ ಕಾಲಮಿತಿಯೊಳಗೆ ಬಿಡುಗಡೆಗೊಳಿಸಲಾಗುವುದು? | ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮಂಜೂರಾಗಿದ್ದ ರೂ. 3.00 ಕೋಟಿಗಳ ಕಾಮಗಾರಿಗಳ ಪೈಕಿ ಪೂರ್ಣಗೊಂಡ ರೂ. 147.00 ಲಕ್ಷಗಳ ಮೊತ್ತದ ರಸ್ತೆ ಕಾಮಗಾರಿಗಳ ಬಾಕಿ ಬಿಲ್ಲುಗಳನ್ನು 2019-20ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದೆ.<br><br>ಬಾಕಿ ಮೊತ್ತ ರೂ. 153.00 ಲಕ್ಷಗಳನ್ನು ಪ್ರಗತಿಯನ್ನಾಧರಿಸಿ ಜಿಲ್ಲಾ ಪಂಚಾಯತ್ ಸಲ್ಲಿಸುವ ಕೋರಿಕೆಯಂತೆ ಅನುದಾನದ ಲಭ್ಯತೆಯನ್ನಾಧರಿಸಿ ಬಿಡುಗಡೆ ಮಾಡಲಾಗುವುದು. |

ಕಡತ ಸಂಖ್ಯೆ: ಗ್ರಾಅಪ:ಅಧಿ08/30:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | – 877 |
| ಉತ್ತರಿಸಬೇಕಾದ ದಿನಾಂಕ | – 09-12-2020 |
| ಸದಸ್ಯರ ಹೆಸರು | – ಶ್ರೀ. ರಾಜೇಗೌಡ ಟಿ.ಡಿ. (ಶೃಂಗೇರಿ) |
| ಉತ್ತರಿಸುವ ಸಚಿವರು | – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗಂಗಾ ಕಲ್ಯಾಣ ಯೋಜನೆಯಡಿ ಪ್ರತಿ ತಾಲ್ಲೂಕುಗಳಿಗೆ ಎಷ್ಟು ಅಲ್ಪಸಂಖ್ಯಾತ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು; (ಸರ್ಕಾರಿ ಆದೇಶದೊಂದಿಗೆ ವಿವರ ನೀಡುವುದು) | ಆಯವ್ಯಯದಲ್ಲಿ ಘೋಷಿಸಿದ ಅನುದಾನದನ್ವಯ 2011ರ ಜನಗಣತಿಯಲ್ಲಿ ಅಲ್ಪಸಂಖ್ಯಾತ ಜನಸಂಖ್ಯೆಯ ಆಧಾರದ ಮೇಲೆ ಜಿಲ್ಲಾವಾರು ಗುರಿಯನ್ನು ನಿಗದಿಪಡಿಸಲಾಗುವುದು. |
| ಆ) | ಎನ್.ಆರ್.ಪುರ ತಾಲ್ಲೂಕಿನಲ್ಲಿ ಸುಮಾರು 6-8 ಸಾವಿರ ಅಲ್ಪಸಂಖ್ಯಾತರಿದ್ದು, ಈ ತಾಲ್ಲೂಕಿಗೆ ನಿಗದಿಪಡಿಸಿರುವ ಫಲಾನುಭವಿಗಳ ಸಂಖ್ಯೆ ಎಷ್ಟು; | ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ಈ ಕೆಳಕಂಡಂತೆ ಗುರಿ ನಿಗದಿಪಡಿಸಲಾಗಿದೆ. (ಕೆಳಗಿನ ಕೋಷ್ಟಕ ನೋಡಿ) |
| ಇ) | ಪ್ರಸ್ತುತವಿರುವ ಮಿತಿಯನ್ನು 150ಕ್ಕೆ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | –ಇಲ್ಲ– |
| ಈ) | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಮಿತಿ ಹೆಚ್ಚಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳುವುದು? | –ಉದ್ಭವಿಸುವುದಿಲ್ಲ– |

| ಕ್ರ. ಸಂ | ವಿಧಾನಸಭಾ ಕ್ಷೇತ್ರವಾರು | ಭೌತಿಕ ಗುರಿ | ಆರ್ಥಿಕ ಗುರಿ (ಲಕ್ಷ ರೂ.) |
|---|---|---|---|
| 1 | ಶೃಂಗೇರಿ (ಎನ್‌ಆರ್‌ಪುರ ತಾಲ್ಲೂಕು ಈ ಕ್ಷೇತ್ರದಲ್ಲಿದೆ | 1 | 2.00 |
| 2 | ಮೂಡಿಗೆರೆ | 1 | 2.00 |
| 3 | ಚಿಕ್ಕಮಗಳೂರು | 2 | 4.00 |
| 4 | ತರಿಕೆರೆ | 2 | 4.00 |
| 5 | ಕಡೂರು | 2 | 4.00 |
| | ಒಟ್ಟು | 8 | 16.00 |

ಸಂಖ್ಯೆ:MWD 179 LMQ 2020

(ಶ್ರೀಮಂತ ಬಾಳಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

**ಕರ್ನಾಟಕ ವಿಧಾನ ಸಭೆ**
**15ನೇ ವಿಧಾನ ಸಭೆ 8ನೇ ಅಧಿವೇಶನ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 881
ಸದಸ್ಯರ ಹೆಸರು : ರಂಗನಾಥ್ ಹೆಚ್.ಡಿ ಡಾ॥ (ಕುಣಿಗಲ್)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕುಣಿಗಲ್ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು (ಪಿಡಿಓ) ರಾಜಕೀಯ ಪ್ರಭಾರ ಬಳಸಿ ಹಲವು ವರ್ಷಗಳ ಕಾಲ ಒಂದೇ ಜಾಗದಲ್ಲಿ ಕಾರ್ಯನಿರ್ವಹಿಸುತ್ತಿರುವುದು ಹಾಗೂ ಅವ್ಯವಹಾರ/ಅಕ್ರಮಗಳಲ್ಲಿ ತೊಡಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕುಣಿಗಲ್ ತಾಲ್ಲೂಕಿನಲ್ಲಿ ಒಟ್ಟು 36 ಗ್ರಾಮ ಪಂಚಾಯತಿಗಳಿದ್ದು, 33 ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ.<br><br>ಅವ್ಯವಹಾರ / ಅಕ್ರಮಗಳಲ್ಲಿ ತೊಡಗಿರುವ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸಲು ಕ್ರಮ ವಹಿಸಲಾಗುತ್ತಿದೆ. |
| (ಆ) | ಬಂದಿದ್ದಲ್ಲಿ, ಒಂದೇ ಜಾಗದಲ್ಲಿ 05ವರ್ಷಕ್ಕೂ ಮೇಲ್ಪಟ್ಟು ಸೇವೆ ಸಲ್ಲಿಸಿದ ಪಿಡಿಓಗಳನ್ನು ವರ್ಗಾವಣೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೆ; ಈ ಕುರಿತು ಸರ್ಕಾರದ ಸ್ಪಷ್ಟ ನಿಲುವೇನು; | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಹೊರಡಿಸುವ ಸಾರ್ವತ್ರಿಕ ವರ್ಗಾವಣೆ ಮಾರ್ಗಸೂಚಿಯಂತೆ ನಿಗದಿಪಡಿಸುವ ಶೇಕಡವಾರು ಪ್ರಮಾಣದಲ್ಲಿ ಕಾರ್ಯನಿರತ ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದದ ನೌಕರರನ್ನು ವರ್ಗಾವಣೆ ಮಾಡಲಾಗುತ್ತದೆ.<br><br>ಕುಣಿಗಲ್ ತಾಲ್ಲೂಕಿನ ಎಲ್ಲಾ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳನ್ನು ಪೂರ್ಣ ಪ್ರಮಾಣದಲ್ಲಿ ವರ್ಗಾವಣೆ ಮಾಡಿರುವುದಿಲ್ಲ. |
| (ಇ) | ಕೆಲವು ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು 10 ವರ್ಷಗಳಿಂದ ಒಂದೇ ಜಾಗದಲ್ಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಈ) | ಬಂದಿದ್ದಲ್ಲಿ, ಅದರಿಂದಾಗುವ ದುಷ್ಪರಿಣಾಮವನ್ನು ತಡೆಯಲು ಏನು ಕ್ರಮ ಕೈಗೊಳ್ಳಲಾಗಿದೆ? | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಹೊರಡಿಸುವ ಸಾರ್ವತ್ರಿಕ ವರ್ಗಾವಣೆ ಮಾರ್ಗಸೂಚಿಯಂತೆ ನಿಗದಿಪಡಿಸುವ ಶೇಕಡವಾರು ಪ್ರಮಾಣದಲ್ಲಿ ಕಾರ್ಯನಿರತ ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದದ ನೌಕರರನ್ನು ವರ್ಗಾವಣೆ ಮಾಡಲಾಗುತ್ತದೆ. |

ಸಂ. ಗ್ರಾಅಪ 881 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 118

ಸದಸ್ಯರ ಹೆಸರು : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 09-12-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ಜಿಲ್ಲೆ, ರಾಯಭಾಗ ತಾಲ್ಲೂಕಿನಲ್ಲಿರುವ ಕೆ.ಎಸ್.ಆರ್.ಟಿ.ಸಿ ಘಟಕಕ್ಕೆ ಬಹಳ ದಿನಗಳಿಂದ ಹೊಸ ಬಸ್ಸುಗಳನ್ನು ಪೂರೈಸದೇ ಪ್ರಯಾಣಿಕರು ಹಳೆಯ ಬಸ್ಸುಗಳಲ್ಲಿ ಪ್ರಯಾಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ. | ಬಂದಿದ್ದಲ್ಲಿ, ಈ ಹಳೆಯ ಬಸ್ಸುಗಳು ಆಗಾಗ್ಗೆ ದುರಸ್ತಿಗೆ ಬಂದು ಪ್ರಯಾಣಿಕರು ತೊಂದರೆಗೀಡಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಾ.ಕ.ರ.ಸಾ.ಸಂಸ್ಥೆಯ ಚಿಕ್ಕೋಡಿ ವಿಭಾಗದ ರಾಯಭಾಗ ಘಟಕದ ಹಳೆಯ ವಾಹನಗಳನ್ನು ನಿಷ್ಕ್ರಿಯಗೊಳಿಸಿ ಹೊಸ ವಾಹನಗಳನ್ನು ಪೂರೈಕೆ ಮಾಡಲಾಗುತ್ತಿದೆ ಹಾಗೂ ವಾಹನಗಳು ದುರಸ್ಥಿಗೆ ಬರದಂತೆ ವಾಹನಗಳ ಮುಂಜಾಗೃತ ನಿರ್ವಹಣಾ ಕ್ರಮಗಳನ್ನು ಕೈಗೊಂಡು ಕಾರ್ಯಾಚರಣೆ ಮಾಡಲಾಗುತ್ತಿದೆ. |
| ಇ. | ಬಂದಿದ್ದಲ್ಲಿ, ಈ ಘಟಕಕ್ಕೆ ಹೊಸ ಬಸ್ಸುಗಳನ್ನು ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ಸಂಸ್ಥೆಯು ನಿಗದಿಪಡಿಸಿರುವ ಮಾನದಂಡದನ್ವಯ ಹಳೆಯ ಬಸ್ಸುಗಳನ್ನು ನಿಷ್ಕ್ರಿಯಗೊಳಿಸಿ, ಹೊಸ ಬಸ್ಸುಗಳನ್ನು ಸಂಸ್ಥೆಯ ಕಾರ್ಯಯೋಜನೆ ಅನ್ವಯ ಪೂರೈಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ರಾಯಭಾಗ ಘಟಕದಲ್ಲಿ ಕಳೆದ 02 ವರ್ಷಗಳಲ್ಲಿ ನಿಷ್ಕ್ರಿಯಗೊಳಿಸಿದ ಮತ್ತು ಹೊಸ ವಾಹನ ಹಂಚಿಕೆ ಮಾಡಿದ ವಿವರ ಈ ಕೆಳಗಿನಂತಿದೆ:<br><br>ವರ್ಷ / ನಿಷ್ಕ್ರಿಯಗೊಂಡ ವಾಹನಗಳ ಸಂಖ್ಯೆ / ಪೂರೈಸಿದ ಹೊಸ ವಾಹನಗಳ ಸಂಖ್ಯೆ<br>2019-20 / 10 / 10<br>2020-21 / 04 / 00 |
| ಈ. | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಹೊಸ ಬಸ್ಸುಗಳನ್ನು ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದು; ಇಲ್ಲವಾದಲ್ಲಿ ಕಾರಣಗಳೇನು; (ವಿವರ ನೀಡುವುದು.) | ಪ್ರಸ್ತುತ ಕೋವಿಡ್-19ರ ರೋಗದ ಹಿನ್ನೆಲೆಯಲ್ಲಿ ಸಂಸ್ಥೆಯು ಆರ್ಥಿಕ ಸಂಕಷ್ಟದಲ್ಲಿರುವುದರಿಂದ, ಡಿಸೆಂಬರ್-2020ರವರೆಗೆ ಯಾವುದೇ ಹೊಸ ವಾಹನಗಳನ್ನು ಖರೀದಿಸುವ ಪ್ರಕ್ರಿಯೆಗೆ ತಡೆಹಿಡಿಯಲಾಗಿದೆ. ಮುಂದಿನ ದಿನಗಳಲ್ಲಿ ಕಾರ್ಯ ಯೋಜನೆಯಂತೆ ಹೊಸ ಬಸ್ಸುಗಳನ್ನು ಪೂರೈಸಲಾಗುವುದು. |

...2

| | | |
|---|---|---|
| ಉ. | ಈ ಘಟಕಕ್ಕೆ ಎಸ್.ಯು.ಟಿ.ಎಫ್. ನಿಧಿಯಿಂದ ಈವರೆವಿಗೂ ಎಷ್ಟು ಬಸ್ಸುಗಳನ್ನು ಒದಗಿಸಲಾಗಿದೆ; (ವಿವರ ನೀಡುವುದು); | ಈ ಘಟಕಕ್ಕೆ ಎಸ್.ಯು.ಟಿ.ಎಫ್. ನಿಧಿಯಿಂದ ಬಸ್ಸುಗಳನ್ನು ಒದಗಿಸಿರುವುದಿಲ್ಲ. |
| ಊ. | ಇಲ್ಲದಿದ್ದಲ್ಲಿ, ಈ ನಿಧಿಯಿಂದ ಯಾವ ಕಾಲಮಿತಿಯಲ್ಲಿ ಎಷ್ಟು ಹೊಸ ಬಸ್ಸುಗಳನ್ನು ಒದಗಿಸಲಾಗುವುದು? (ಕಾರಣಗಳ ಸಹಿತ ವಿವರ ನೀಡುವುದು) | ಮುಂಬರುವ ದಿನಗಳಲ್ಲಿ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ನೀತಿ ನಿರ್ಧಾರಗಳಯನ್ವಯ ಬೇಡಿಕೆಗೆ ಅನುಗುಣವಾಗಿ ಬೆಳಗಾವಿ ಜಿಲ್ಲೆ, ರಾಯಭಾಗ ಘಟಕಕ್ಕೆ ಎಸ್.ಯು.ಟಿ.ಎಫ್. ನಿಧಿಯಿಂದ ಬಸ್ಸುಗಳನ್ನು ಖರೀದಿಸಿ, ಒದಗಿಸಲು ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಟಿಡಿ 215 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರ ಹೆಸರು | : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : 122 |
| ಉತ್ತರಿಸಬೇಕಾದ ದಿನಾಂಕ | : 09.12.2020. |
| ಉತ್ತರಿಸಬೇಕಾದ ಸಚಿವರು | : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು. |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳ |
|---|---|---|
| ಅ | ಬೆಳಗಾವಿ ಜಿಲ್ಲೆ, ರಾಯಭಾಗ ಮತಕ್ಷೇತ್ರದ ರಾಯಭಾಗ ಹಾಗೂ ಚಿಕ್ಕೋಡಿ ತಾಲೂಕಿನ ಪಶು ಚಿಕಿತ್ಸಾ ಕೇಂದ್ರಗಳ ಹಾಗೂ ಪಶು ಚಿಕಿತ್ಸಾಲಯಗಳ ಕಟ್ಟಡಗಳು ಹಳೆಯದಾಗಿದ್ದು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಯಭಾಗ ಮತಕ್ಷೇತ್ರದಲ್ಲಿ (ರಾಯಭಾಗ ತಾ: -07 ಹಾಗೂ ಚಿಕ್ಕೋಡಿ ತಾ:-06) ಒಟ್ಟು 13 ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು ಅವುಗಳಲ್ಲಿ ಚಿಕ್ಕೋಡಿ ತಾಲೂಕಿನ 06 ಪಶುವೈದ್ಯಕೀಯ ಸಂಸ್ಥೆಗಳು ಸುಸ್ಥಿತಿಯಲ್ಲಿವೆ, ರಾಯಬಾಗ ತಾಲೂಕಿನ 07 ಪಶುವೈದ್ಯಕೀಯ ಸಂಸ್ಥೆಗಳ ಪೈಕಿ 03 ಸಂಸ್ಥೆಗಳು ಸುಸ್ಥಿತಿಯಲ್ಲಿದ್ದು ಉಳಿದ 04 ಪಶು ವೈದ್ಯಕೀಯ ಸಂಸ್ಥೆಗಳಿಗೆ ದುರಸ್ಥಿಯಾಗಬೇಕಾಗಿರುತ್ತದೆ |
| ಆ | ಬಂದಿದ್ದಲ್ಲಿ, ಈ ಪಶು ಚಿಕಿತ್ಸಾಲಯಗಳ ಕೇಂದ್ರಗಳು ಹಾಗೂ ಪಶುಚಿಕಿತ್ಸಾಲಯಗಳ ಕೇಂದ್ರಗಳ ದುರಸ್ತಿಗೆ ಸರ್ಕಾರ ಕೈಗೊಂಡ ಕ್ರಮಗಳೇನು (ವಿವರ ನೀಡುವುದು) | ರಾಯಬಾಗ ತಾಲೂಕಿನ 07 ಪಶುವೈದ್ಯಕೀಯ ಸಂಸ್ಥೆಗಳ ಪೈಕಿ 03 ಸಂಸ್ಥೆಗಳು ಸುಸ್ಥಿತಿಯಲ್ಲಿದ್ದು ಉಳಿದ 04 ಪಶು ವೈದ್ಯಕೀಯ ಸಂಸ್ಥೆಗಳಿಗೆ ದುರಸ್ಥಿಯಾಗಬೇಕಾಗಿರುತ್ತದೆ. 2020-21ನೇ ಸಾಲಿಗೆ ಬೆಂಥವಾಡ ಪಶು ಚಿಕಿತ್ಸಾಲಯ ಕಟ್ಟಡ ದುರಸ್ತಿ ಕಾಮಗಾರಿಗೆ ರೂ.5.00 ಲಕ್ಷ ಅನುದಾನ ನಿಗದಿಪಡಿಸಲಾಗಿದೆ. ಹಾಗೂ ಉಳಿದ ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರ, ಚಿಂಚಲಿ/ಮೇಖಳಿ/ಕಂಕಣವಾಡಿ ಕಟ್ಟಡಗಳಿಗೆ ಸಣ್ಣ-ಪುಟ್ಟ ದುರಸ್ತಿ ಕಾಮಗಾರಿ ಕೈಗೊಳ್ಳಬೇಕಾಗಿದೆ. 2021-22ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಯ ಕಟ್ಟ |

| | | |
|---|---|---|
| | | ಡ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ ಕಾಮಗಾರಿಯನ್ನು ಕೈಗೊಳ್ಳಲು ಕ್ರಮವಹಿಸಲಾಗುವುದು |
| ಇ | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ಕಟ್ಟಡಗಳ ದುರಸ್ತಿಗೆ ಸರ್ಕಾರ ಕ್ರಮ ಕೈಗೊಳ್ಳುವುದು: | 2021-22ನೇ ಸಾಲಿನ ಜಿಲ್ಲಾ ಪಂಚಾಯತಿ ಕಟ್ಟಡ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಲಭ್ಯ ಇರುವ ಅನುದಾನದಲ್ಲಿ ಕಟ್ಟಡ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮ ವಹಿಸಲಾಗುವುದು. |
| ಈ | ಇಲ್ಲದಿದ್ದಲ್ಲಿ, ಕಾರಣಗಳೇನು? (ವಿವರ ನೀಡುವುದು) - | ದುರಸ್ಥಿಗೆ ಕ್ರಮವಹಿಸಲಾಗುತ್ತಿದೆ. |

**ಪಸಂಮೀ ಇ-307 ಸಲವಿ 2020**

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: | 127 |
| ಸದಸ್ಯರ ಹೆಸರು | ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) |
| ಉತ್ತರಿಸಬೇಕಾದ ದಿನಾಂಕ: | 09.12.2020 |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಪ್ರಸಕ್ತ ವರ್ಷದಲ್ಲಿ ಪ್ರಕೃತಿ ವಿಕೋಪ ಯೋಜನೆಯಡಿಯಲ್ಲಿ ಬಿಡುಗಡೆಯಾದನುದಾನವೆಷ್ಟು; | ಪ್ರಸಕ್ತ ವರ್ಷದಲ್ಲಿ ಪ್ರಕೃತಿ ವಿಕೋಪ ಯೋಜನೆಯಡಿಯಲ್ಲಿ ಯಾವುದೇ ಅನುದಾನವನ್ನು ಬಿಡುಗಡೆ ಮಾಡಿರುವುದಿಲ್ಲ. |
| ಆ | ಸದರಿ ಅನುದಾನವನ್ನು ರಾಜ್ಯದಲ್ಲಿ ಯಾವ ಯಾವ ತಾಲ್ಲೂಕುಗಳಿಗೆ ನೀಡಲಾಗಿದೆ; (ಅನುದಾನವಾರು, ತಾಲ್ಲೂಕುವಾರು, ದಿನಾಂಕವಾರು ಸಂಪೂರ್ಣ ವಿವರ ಒದಗಿಸುವುದು) | ಉದ್ಭವಿಸುವುದಿಲ್ಲ. |
| ಇ | ಪ್ರಸ್ತುತ ಭಾರಿ ಮಳೆಯಿಂದಾಗಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿ ಗ್ರಾಮೀಣ ರಸ್ತೆಗಳು ಮತ್ತು ಸೇತುವೆಗಳು ಹಾಳಾಗಿ ನಷ್ಟವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಈ | ಬಂದಿದ್ದಲ್ಲಿ, ಸದರಿ ಸಾರ್ವಜನಿಕ ರಸ್ತೆಗಳನ್ನು ದುರಸ್ಥಿಗೊಳಿಸಲು ಪ್ರಕೃತಿ ವಿಕೋಪ ನಿಧಿಯಿಂದ ಅನುದಾನ ಬಿಡುಗಡೆಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಪ್ರಸ್ತುತ ಸಾಲಿನಲ್ಲಿ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳ ವಿವರಗಳನ್ನು ಮುಖ್ಯ ಇಂಜಿನಿಯರ್, ಪಿ.ಆರ್.ಇ.ಡಿ. ಹಾಗೂ ಮುಖ್ಯ ಕಾರ್ಯಾಚರಣೆ ಅಧಿಕಾರಿಗಳು, ಕೆ.ಆರ್.ಆರ್.ಡಿ.ಎ ರವರುಗಳಿಂದ ಪಡೆದು ಕ್ರೋಢೀಕರಿಸಿ ರೂ.110531.61ಲಕ್ಷಗಳ ಅನುದಾನಕ್ಕೆ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ರವರಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಇದರಲ್ಲಿ ಸಾಗರ ತಾಲ್ಲೂಕಿಗೆ ರಸ್ತೆ ಕಾಮಗಾರಿಗಳಿಗೆ ರೂ.73.70ಲಕ್ಷಗಳು ಸೇತುವೆಗಳಿಗಾಗಿ ರೂ.68.80ಲಕ್ಷಗಳು ಸೇರಿರುತ್ತದೆ. |
| ಉ | ಹಾಗಿದ್ದಲ್ಲಿ, ಅನುದಾನ ಬಿಡುಗಡೆಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | |

| | | |
|---|---|---|
| | | ಅನುದಾನ ಬಿಡುಗಡೆಯಾದ ನಂತರ ರಸ್ತೆಗಳ ಅಭಿವೃದ್ಧಿಗೆ ಅನುದಾನವನ್ನು ಹಂಚಿಕೆ ಮಾಡಬೇಕಾಗಿದೆ. |

ಕಡತ ಸಂಖ್ಯೆ:ಗ್ರಾಅಪ:ಅಧಿ-08/2:ಆರ್‌ಆರ್‌ಸಿ:2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು
ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: | 494 |
| ಸದಸ್ಯರ ಹೆಸರು | ಶ್ರೀ ಅಪ್ಪಚ್ಚು ರಂಜನ್ ಎಂ.ಪಿ (ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ: | 09.12.2020 |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕೊಡಗಿನಲ್ಲಿ ಕಳೆದ ಮೂರು ವರ್ಷಗಳಿಂದ ಹಾಗೂ ಪ್ರಸಕ್ತವರ್ಷ ಬಿದ್ದ ಭಾರಿ ಮಳೆಯಿಂದ ರಸ್ತೆಗಳು, ಕೆರೆ ಕಟ್ಟೆಗಳು ಸೇತುವೆಗಳು ಹಾಳಾಗಿ ಸಂಚಾರಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕೊಡಗಿನಲ್ಲಿ ಕಳೆದ ಮೂರು ವರ್ಷದಿಂದ ಹಾಗೂ ಪ್ರಸಕ್ತ ವರ್ಷದ ಮಳೆಯಿಂದ ರಸ್ತೆಗಳು ಮತ್ತು ಸೇತುವೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಇದಕ್ಕಾಗಿ, ಎಷ್ಟು ಅನುದಾನ ಮೀಸಲಿಡಲಾಗಿದೆ; ವಿಶೇಷ ಅನುದಾನ ನೀಡಲು ಸರ್ಕಾರ ತೆಗೆದುಕೊಂಡ ಕ್ರಮವೇನು; | ಇದಕ್ಕಾಗಿ ಮೀಸಲಿಟ್ಟ ಸರ್ಕಾರವು ಬಿಡುಗಡೆ ಮಾಡಿದ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತವೆ: |

| ಕ್ರ.ಸಂ | ವರ್ಷ | ಸರ್ಕಾರ ಅನುಮೋದಿಸಿದ ಕಾಮಗಾರಿಗಳ ಸಂಖ್ಯೆ | ಮೀಸಲಿಟ್ಟ ಅನುದಾನ (ರೂ. ಲಕ್ಷಗಳಲ್ಲಿ) | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|---|
| 01 | 2018-19 | 17 | 421.41 | 421.41 |
| 02 | 2019-20 | 863 | 8905.89 | 3350.00 |

ಪ್ರಸಕ್ತ ಸಾಲಿನಲ್ಲಿ ಕೊಡಗು ಜಿಲ್ಲೆಯಲ್ಲಿ ಮಳೆಯಿಂದ ಹಾನಿಗೊಳಗಾದ ವಿವರಗಳನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಮತ್ತು ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಿಂದ ಪಡೆದು ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಗೆ ಸಲ್ಲಿಸಲಾಗಿದ್ದು, ಅನುದಾನವನ್ನು ನಿರೀಕ್ಷಿಸಲಾಗಿದೆ.

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಇ | ಗ್ರಾಮ ಪಂಚಾಯಿತಿಗಳಲ್ಲಿ 11ಬಿ. ಖಾತೆಗಳು ರಿಜಿಸ್ಟ್ರೇಷನ್ ಆಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; 11ಬಿ ಖಾತೆಯ ಪರಾಭಾರೆಯನ್ನು ಸರ್ಕಾರ ಹಿಂಪಡೆಯಲು ಕಾರಣವೇನು; | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ಧವಲ್ಲದ ಆಸ್ತಿಗಳಿಗೆ ಅಂದರೆ ದಿನಾಂಕ:14-06-2013 ರೊಳಗೆ ಒಂದು ಬಾರಿ ಕ್ರಯವಾಗಿರುವ ನಿವೇಶನಗಳು, ಕಟ್ಟಡಗಳಿಗೆ ಹಳೆಯ 6 ತಿಂಗಳ ಪೂರ್ವದ ಯಾವುದಾದರೂ ಒಂದು ತಿಂಗಳ ವಿದ್ಯುತ್‌ಬಿಲ್‌ನ್ನು ಪಡೆದು ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ-11ಬಿ ನೀಡಲಾಗುತ್ತಿದ್ದು, ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಾಯಿಸಬಹುದಾಗಿದೆ.<br><br>ದಿನಾಂಕ: 14-06-2013 ರ ನಂತರ ಜಿಲ್ಲಾಧಿಕಾರಿಗಳಿಂದ |
| ಈ | ಗ್ರಾಮ ಪಂಚಾಯಿತಿಗಳಲ್ಲಿ 11ಬಿ. ಖಾತೆ ಮಾಡಿಕೊಂಡು ಪರವಾನಿಗೆ ಪಡೆದುಕೊಂಡ ನಂತರ ಬ್ಯಾಂಕುಗಳು ಇಂತರ ಖಾತೆಗಳಿಗೆ ಸಾಲ ನೀಡದಿರುವುದು | |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | ಸರ್ಕಾರದ ಗಮನಕ್ಕೆ ಬಂದಿದೆಯೇ: | ಭೂಪರಿವರ್ತನೆಯಾಗಿ ಲೇ ಔಟ್ ಅನುಮೋದನೆಯಾಗದ ಆಸ್ತಿಗಳಿಗೆ ಪೂರ್ಣ ಜಮೀನಿಗೆ ತೆರಿಗೆ ಉದ್ದೇಶಕ್ಕಾಗಿ ನಮೂನೆ 11 ಬಿ ನೀಡಲಾಗುತ್ತಿದೆ. ಈ ಆಸ್ತಿಗಳನ್ನು ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಾಯಿಸಲು ಅವಕಾಶವಿರುವುದಿಲ್ಲ.<br><br>ಕ್ರಮಬದ್ಧವಲ್ಲದ ಆಸ್ತಿಗಳಿಗೆ ಬ್ಯಾಂಕ್‌ಗಳು ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಉ | ಈ ಜಿಲ್ಲೆಯಲ್ಲಿ ಎಷ್ಟು ಗ್ರಾಮ ಪಂಚಾಯಿತಿಯಲ್ಲಿ ವೈಜ್ಞಾನಿಕ ಕಸ ವಿಲೇವಾರಿ ಘಟಕಗಳು ಮಂಜೂರಾಗಿವೆ; ಇದರಲ್ಲಿ ಕಾರ್ಯಾರಂಭ ಮಾಡಿರುವ ಘಟಕಗಳೆಷ್ಟು; ಬಾಕಿ ಇರುವ ಘಟಕಗಳು ಯಾವಾಗ ಪ್ರಾರಂಭ ಮಾಡಲಾಗುವುದು; ವಿಳಂಬಕ್ಕೆ ಕಾರಣವೇನು; (ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಒಟ್ಟು 104 ಗ್ರಾಮ ಪಂಚಾಯತಿಗಳಿದ್ದು, ಸ್ವಚ್ಛ ಭಾರತ್ ಮಿಷನ್ (ಗ್ರಾ) ಯೋಜನೆಯಡಿ 104 ಗ್ರಾಮ ಪಂಚಾಯತಿಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಯ ವಿಸ್ತೃತ ಯೋಜನಾ ವರದಿಗಳಿಗೆ (ಡಿಪಿಆರ್) ಅನುಮೋದನೆ ನೀಡಲಾಗಿರುತ್ತದೆ. ಈ ಪೈಕಿ 28 ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಕವಾಗಿ ತ್ಯಾಜ್ಯ ಸಂಸ್ಕರಣೆ ಮಾಡಲಾಗುತ್ತಿದೆ ಹಾಗೂ ಇನ್ನುಳಿದ ಗ್ರಾಮ ಪಂಚಾಯತಿಗಳಲ್ಲಿ ಪ್ರಸ್ತುತ ತಾತ್ಕಾಲಿಕ ಕಟ್ಟಡವನ್ನು ಗುರುತಿಸಿ, ತ್ಯಾಜ್ಯ ಸಂಸ್ಕರಣೆ ಮತ್ತು ನಿರ್ವಹಣೆ ಮಾಡಲು ಕ್ರಮವಹಿಸಲಾಗಿದೆ.<br><br>ಈ ಪೈಕಿ 52 ಗ್ರಾಮ ಪಂಚಾಯತಿಗಳಿಗೆ ಜಾಗವನ್ನು ಮಂಜೂರು ಮಾಡಲು ಕಂದಾಯ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಪ್ರಸ್ತಾವನೆಯು ಕಂದಾಯ ಇಲಾಖೆಯ ವಿವಿಧ ಹಂತದಲ್ಲಿದ್ದು, ಅನುಮೋದನೆಗೆ ಕ್ರಮವಹಿಸಲಾಗುತ್ತಿದೆ. ಜಾಗದ ಅನುಮೋದನೆ ದುರೆತ ನಂತರ ತ್ಯಾಜ್ಯ ವಿಲೇವಾರಿ ಘಟಕ ನಿರ್ಮಿಸಿ, ಕಾರ್ಯಾರಂಭ ಮಾಡಲಾಗುವುದು. |
| ಊ | ಗ್ರಾಮ ಪಂಚಾಯಿತಿಗಳಲ್ಲಿ ವೈಜ್ಞಾನಿಕವಾಗಿ ತಯಾರಾಗುವ ಗೊಬ್ಬರವನ್ನು ವಿಲೇವಾರಿ ಮಾಡಲು ಸರ್ಕಾರ ನಿಗದಿಪಡಿಸಿರುವ ಮಾರ್ಗಸೂಚಿಗಳೇನು? | ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಜವಾಗಿ ತಯಾರಾಗುವ ಗೊಬ್ಬರವನ್ನು ಗ್ರಾಮ ಪಂಚಾಯತಿ ಮಟ್ಟದಲ್ಲಿ ಮಾರಾಟ ಮಾಡಿ, ತ್ಯಾಜ್ಯ ನಿರ್ವಹಣೆ ಘಟಕದ ವೆಚ್ಚವನ್ನು ಅದರಲ್ಲಿ ಭರಿಸಿಕೊಳ್ಳಲು ಅವಕಾಶ ನೀಡಲಾಗಿದೆ.<br>ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯನ್ನು ಸೂಕ್ತ ರೀತಿಯಲ್ಲಿ ನಿರ್ವಹಣೆ ಮಾಡಲು " ಕರ್ನಾಟಕ ರಾಜ್ಯ ನೈರ್ಮಲ್ಯ ಮತ್ತು ತ್ಯಾಜ್ಯ ನಿರ್ವಹಣಾ ನೀತಿ, ಕಾರ್ಯತಂತ್ರ ಮತ್ತು ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯ ಮಾದರಿ ಉಪನಿಧಿಗಳು-2020" ಜಾರಿಗೆ ತಂದಿದ್ದು, ಅದರಂತೆ ಕ್ರಮ ವಹಿಸಲು ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿದೆ. |

ಕಡತ ಸಂಖ್ಯೆ:ಗ್ರಾಅಪ:ಅಧಿ-08/12:ಆರ್‌ಆರ್‌ಸಿ:2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 498 |
| ಸದಸ್ಯರ ಹೆಸರು | : | ಶ್ರೀ.ನರೇಂದ್ರ.ಆರ್ (ಹನೂರು) |
| ಉತ್ತರಿಸುವ ದಿನಾಂಕ | : | 09.12.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಚಾಮರಾಜ ನಗರ ಜಿಲ್ಲೆಯಲ್ಲಿರುವ ಪಶುಚಿಕಿತ್ಸಾಲಯಗಳು ಹಾಗೂ ಪಶು ಆಸ್ಪತ್ರೆಗಳ ಸಂಖ್ಯೆ ಎಷ್ಟು; (ಕ್ಷೇತ್ರವಾರು ವಿವರ ನೀಡುವುದು) | ಚಾಮರಾಜ ನಗರ ಜಿಲ್ಲೆಯಲ್ಲಿ ಈ ಕೆಳಕಂಡಂತೆ 83 ಪಶು ವೈದ್ಯಕೀಯ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. |

| ವಿಧಾನಸಭಾ ಕ್ಷೇತ್ರ | ಪಾಲಿ ಕ್ಲಿನಿಕ್ | ಪಶು ಆಸ್ಪತ್ರೆ | ಪಶು ಚಿಕಿತ್ಸಾಲಯ | ಪ್ರಾಥಮಿಕ ಪಶು ಚಿಕಿತಾ ಕೇಂದ್ರ | ಸಂಚಾರಿ ಪಶು ಚಿಕಿತ್ಸಾಲಯ | ಒಟ್ಟು |
|---|---|---|---|---|---|---|
| ಚಾಮರಾಜ ನಗರ | 1 | 0 | 11 | 4 | 1 | 17 |
| ಗುಂಡ್ಲುಪೇಟೆ | 0 | 6 | 8 | 11 | 1 | 26 |
| ಕೊಳ್ಳೆಗಾಲ | 0 | 4 | 9 | 7 | 2 | 22 |
| ಹನೂರು | 0 | 3 | 9 | 6 | 0 | 18 |
| ಒಟ್ಟು | 1 | 13 | 37 | 28 | 4 | 83 |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ | ಈ ಜಿಲ್ಲೆಯ ಪಶು ಚಿಕಿತ್ಸಾಲಯಗಳ ಆಸ್ಪತ್ರೆಗಳಲ್ಲಿ ಪಶುವೈದ್ಯರು ಹಾಗೂ ಇತರೆ ಸಿಬ್ಬಂದಿಗಳ ಕೊರತೆ ಇರುವುದುಸರ್ಕಾರದ ಗಮನಕ್ಕೆ ಬಂದಿದೆಯೇ (ಕ್ಷೇತ್ರವಾರು ಖಾಲಿ ಹುದ್ದೆಗಳ ವಿವರ ಒದಗಿಸುವುದು) | ಚಾಮರಾಜ ನಗರ ಜಿಲ್ಲೆಯಲ್ಲಿ ಪಶುವೈದ್ಯರು ಹಾಗೂ ಇತರೆ ಸಿಬ್ಬಂದಿಗಳ ಹುದ್ದೆಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಖಾಲಿ ಇರುವ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರ ಪಟ್ಟಿ ಈ ಕೆಳಕಂಡಂತೆ ಇರುತ್ತದೆ. |

| ಕ್ರ.ಸಂ | ಪದನಾಮ | ಖಾಲಿ |
|---|---|---|
| 1 | ಸಹಾಯಕ ನಿರ್ದೇಶಕರು | 3 |
| 2 | ಮುಖ್ಯಪಶುವೈದ್ಯಾಧಿಕಾರಿ | 14 |
| 3 | ಪಶುವೈದ್ಯಾಧಿಕಾರಿ | 18 |
| 4 | ಜಾನುವಾರು ಅಭಿವೃದ್ಧಿ ಅಧಿಕಾರಿ | 2 |
| 5 | ಜಾನುವಾರು ಅಧಿಕಾರಿ | 6 |
| 6 | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | 17 |
| 7 | ಪಶುವೈದ್ಯಕೀಯ ಪರೀಕ್ಷಕರು | 02 |
| 8 | ಪಶುವೈದ್ಯಕೀಯ ಸಹಾಯಕರು | 31 |
| 9 | ಎಕ್ಸ್-ರೇ /ಲ್ಯಾಬ್ ಟೆಕ್ನೀಶಿಯನ್ | 1 |
| 10 | ವಾಹನ ಚಾಲಕರು | 4 |
| 11 | "ಡಿ" ದರ್ಜೆ | 81 |
| | ಒಟ್ಟು | 179 |

| | | |
|---|---|---|
| | | ಕ್ಷೇತ್ರವಾರು ಖಾಲಿ ಇರುವ ಹುದ್ದೆಗಳ ವಿವರಗಳನ್ನು **ಅನುಬಂಧ** ದಲ್ಲಿ ನೀಡಲಾಗಿದೆ. |
| ಇ | ಬಂದಿದ್ದಲ್ಲಿ, ಪಶುವೈದ್ಯರು & ಇತರೆ ಸಿಬ್ಬಂದಿಗಳ ನೇಮಕಾತಿಗೆ ಸರ್ಕಾರ ತೆಗೆದು ಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಚಾಮರಾಜ ನಗರ ಜಿಲ್ಲೆಯಲ್ಲಿ ಪ್ರಸ್ತುತ ಖಾಲಿ ಇರುವ ಮುಖ್ಯಪಶುವೈದ್ಯಾಧಿಕಾರಿ ಹಾಗೂ ಹಿರಿಯ ಪಶುವೈದ್ಯಾಧಿಕಾರಿ ಹುದ್ದೆಗಳಿಗೆ ಕಾಲಮಿತಿ ಮುಂಬಡ್ತಿ ಆಧಾರದ ಮೇಲೆ ಹುದ್ದೆಗಳನ್ನು ಭರ್ತಿ ಮಾಡಲು ಆದ್ಯತೆ ಮೇಲೆ ಕ್ರಮವಹಿಸಲಾಗುತ್ತಿದೆ.<br>ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ ೬೩೯ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ನಿಯಮಗಳ ಮುಖಾಂತರ ಭರ್ತಿ ಮಾಡುವ ಪ್ರಸ್ತಾವನೆಗೆ ಪ್ರಸ್ತುತ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ನೀಡಿರುವುದಿಲ್ಲ. ಆರ್ಥಿಕ ಇಲಾಖೆಯಿಂದ ಅನುಮತಿ ದೊರೆತ ಕೂಡಲೇ ಆದ್ಯತೆ ಮೇಲೆ ಪಶುವೈದ್ಯಾಧಿಕಾರಿಗಳ ಖಾಲಿ ಹುದ್ದೆಗಳನ್ನು ತುಂಬಲು ಅಗತ್ಯ ಕ್ರಮ ವಹಿಸಲಾಗುವುದು.<br>**ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆ**:- ಜಿಲ್ಲೆಯಲ್ಲಿ ೨ ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಜಾನುವಾರು ಅಧಿಕಾರಿ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವು ಚಾಲ್ತಿಯಲ್ಲಿರುತ್ತದೆ.<br>**ಜಾನುವಾರು ಅಧಿಕಾರಿ ಹುದ್ದೆ**:- ಜಿಲ್ಲೆಯಲ್ಲಿ ೬ ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಹಿರಿಯ ಪಶುವೈದ್ಯಕೀಯ ಪರೀಕ್ಷಕರ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವು ಚಾಲ್ತಿಯಲ್ಲಿರುತ್ತದೆ.<br>**ಹಿರಿಯ ಪಶುವೈದ್ಯಕೀಯ ಪರೀಕ್ಷಕರ ಹುದ್ದೆ**:- ಜಿಲ್ಲೆಯಲ್ಲಿ 17 ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಪಶುವೈದ್ಯಕೀಯ ಪರೀಕ್ಷಕರ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವು ಚಾಲ್ತಿಯಲ್ಲಿರುತ್ತದೆ.<br>**ಪಶುವೈದ್ಯಕೀಯ ಪರೀಕ್ಷಕರ ಹುದ್ದೆ**:- ಜಿಲ್ಲೆಯಲ್ಲಿ ೨ ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಪಶುವೈದ್ಯಕೀಯ ಸಹಾಯಕರ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವು ಚಾಲ್ತಿಯಲ್ಲಿರುತ್ತದೆ.<br>**ಪಶುವೈದ್ಯಕೀಯ ಸಹಾಯಕರ ಹುದ್ದೆ**:- ಜಿಲ್ಲೆಯಲ್ಲಿ ೩೧ ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು "ಡಿ" ದರ್ಜೆ ಹುದ್ದೆಯಿಂದ ಅರ್ಹ ನೌಕರರಿಗೆ ಮುಂಬಡ್ತಿ ನೀಡುವ ಸಂದರ್ಭದಲ್ಲಿ ಭರ್ತಿ ಮಾಡಲು ಕ್ರಮವಹಿಸಲಾಗುವುದು.<br>**ವಾಹನ ಚಾಲಕರ ಹುದ್ದೆ**:-ಜಿಲ್ಲೆಯಲ್ಲಿ ೦೪ ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳಿಗೆ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು.<br>**"ಡಿ" ದರ್ಜೆ ನೌಕರರ ಹುದ್ದೆ**:-ಜಿಲ್ಲೆಯಲ್ಲಿ ೮೧ ಹುದ್ದೆಗಳು ಖಾಲಿ ಇದ್ದು ಸದರಿ ಹುದ್ದೆಗಳಿಗೆ ಎದುರಾಗಿ 41 ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆ ಪಡೆಯಲಾಗಿದೆ. |

**ಸಂ: ಪಸಂಮೀ ಇ-184 ಪಸಸೇ 2020**

(ಪ್ರಭು. ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 503 |
| ಸದಸ್ಯರ ಹೆಸರು | ಶ್ರೀ ಶಿವಲಿಂಗೇಗೌಡ. (ಅರಸೀಕೆರೆ) |
| ಉತ್ತರಿಸಬೇಕಾದ ದಿನಾಂಕ | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಗ್ರಾಮೀಣ ಪ್ರದೇಶಗಳಲ್ಲಿನ ರಸ್ತೆಗಳ ಅಭಿವೃದ್ಧಿಗೊಸ್ಕರ "ಸುಮಾರ್ಗ" ಯೋಜನೆಯನ್ನು ಪ್ರಸಕ್ತ ಆಯವ್ಯಯದಲ್ಲಿ ಘೋಷಣೆ ಮಾಡಲಾಗಿದೆಯೇ; | ಹೌದು |
| ಆ. | ಈ ಯೋಜನೆ ಎಷ್ಟು ಅನುದಾನ ಒದಗಿಸಲಾಗಿದೆ; ಪ್ರಸ್ತುತ ಈ ಯೋಜನೆ ಕಾರ್ಯರೂಪಕ್ಕೆ ತರಲಾಗಿದೆಯೇ; ಇಲ್ಲದಿದ್ದಲ್ಲಿ ಕಾರಣಗಳೇನು; ಯಾವಾಗ ಕಾರ್ಯರೂಪಕ್ಕೆ ತರಲಾಗುವುದು? | 2020-21 ನೇ ಸಾಲಿನ ಆಯವ್ಯಯ ಘೋಷಣೆ ಸಂಖ್ಯೆ: 147 ರಲ್ಲಿ "ರಾಜ್ಯದಲ್ಲಿ ಚಾಲ್ತಿಯಲ್ಲಿರುವ ನಮ್ಮ ಗ್ರಾಮ ನಮ್ಮ ರಸ್ತೆಯೋಜನೆಯು 2020-21ನೇ ಸಾಲಿನಲ್ಲಿ ಮುಕ್ತಾಯಗೊಳ್ಳಲಿದೆ. ಗ್ರಾಮೀಣ ರಸ್ತೆಗಳ ಸುಧಾರಣೆಗಾಗಿ ಹೊಸದಾಗಿ "ಗ್ರಾಮೀಣ ಸುಮಾರ್ಗ" ಜಾರಿಗೆ ತರಲು ಪ್ರಸ್ತಾಪಿಸಲಾಛಿದೆ. ಇದರಡಿಯಲ್ಲಿ ಮುಂದಿನ ಐದು ವರ್ಷದಲ್ಲಿ 20,000 ಕಿ.ಮೀ ಗ್ರಾಮೀಣ ರಸ್ತೆ ಅಭಿವೃದ್ದಿಪಡಿಸಲು ಉದ್ದೇಶಿಸಿದೆ. ಗ್ರಾಮೀಣ ರಸ್ತೆಗಳ ಸುಧಾರಣೆಗಾಗಿ 2020-21ನೇ ಸಾಲಿನಲ್ಲಿ ರೂ.780.00ಕೋಟಿಗಳನ್ನು ಒದಗಿಸಲಾಗಿದ" ಎಂದು ಘೋಷಿಸಲಾಗಿದೆ.<br><br>ಇದರನ್ವಯ<br><br>• "ಗ್ರಾಮೀಣ ಸುಮಾರ್ಗ" ಯೋಜನೆಯ ಅನುಷ್ಠಾನಕ್ಕಾಗಿ ಸಚಿವ ಸಂಪುಟದ ಅನುಮೋದನೆ ಪಡೆಯಲು ಕರಡು ಸಚಿವ ಸಂಪುಟದ ಟಿಪ್ಪಣಿಯನ್ನು ಆರ್ಥಿಕ ಮತ್ತು ಯೋಜನಾ ಇಲಾಖೆಗಳಿಗೆ ಸಹಮತಿಗಾಗಿ ಸಲ್ಲಿಸಲಾಗಿತ್ತು.<br>• ಯೋಜನಾ ಇಲಾಖೆಯು ಈಗಾಗಲೇ ಸಹಮತಿಯನ್ನು ನೀಡಿದ್ದು,<br>• ಆರ್ಥಿಕ ಇಲಾಖೆಯ ಸಹಮತಿಯನ್ನು ನಿರೀಕ್ಷಿಸಲಾಗಿದೆ. |

| | | |
|---|---|---|
| | | ಸಹಮತಿ ಬಂದ ನಂತರ ಸಚಿವ ಸಂಪುಟದ ಅನುಮೋದನೆ ಪಡೆದು ಯೋಜನೆಯನ್ನು ಕಾರ್ಯರೂಪಕ್ಕೆ ತರಲಾಗುತ್ತದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-08/13:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 509 |
| ಸದಸ್ಯರ ಹೆಸರು | : | ಶ್ರೀ.ಶಿವಾನಂದ.ಎಸ್.ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸುವ ದಿನಾಂಕ | : | 09.12.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವಂತೆ ಮತ್ತು ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳು ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ.<br><br>ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳು ಸರ್ಕಾರದಲ್ಲಿ ಸ್ವೀಕೃತಗೊಂಡಿರುತ್ತದೆ. |
| ಆ) | ಹಾಗಿದ್ದಲ್ಲಿ, ಅಗತ್ಯವಿರುವ ಕಡೆಗಳಲ್ಲಿ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡಲು ಮತ್ತು ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲು ಕೈಗೊಂಡಿರುವ ಕ್ರಮಗಳೇನು; | ಪ್ರಸಕ್ತ ಸಾಲಿನಲ್ಲಿ ನೂತನವಾಗಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸುವ ಯಾವುದೇ ಯೋಜನೆ ಸರ್ಕಾರದ ಮುಂದಿರುವುದಿಲ್ಲ.<br><br>ಆದರೆ, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 278 ಪಸಸೇ 2016, ದಿನಾಂಕ: 09.10.2017 ಅನ್ವಯ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು 2017-18 ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಹಂತ ಹಂತವಾಗಿ ಮೇಲ್ದರ್ಜೆಗೇರಿಸಲು ಕಾರ್ಯಕ್ರಮ ಹಮ್ಮಿಕೊಳ್ಳಲಾಗಿರುತ್ತದೆ. 2017-18 ನೇ ಸಾಲಿನಲ್ಲಿ ಈಗಾಗಲೇ 302 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿರುತ್ತದೆ. ಉಳಿದಂತೆ 2018-19 ನೇ ಸಾಲಿನಲ್ಲಿ 400 ಹಾಗೂ 2019-20 ನೇ ಸಾಲಿನಲ್ಲಿ 400 ಒಟ್ಟು 800 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತಾಲಯಗಳನ್ನಾಗಿ ಮೇಲ್ದರ್ಜೆಗೇರಿಸಬೇಕಾಗಿದ್ದು, ಈ ಸಂಬಂಧ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿರುತ್ತದೆ. ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಅದ್ಯತೆ ಮೇರೆಗೆ ಪ್ರಾಥಮಿಕ |

| | | |
|---|---|---|
| | | ಪಶುಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೇಗೇರಿಸಲು ಕ್ರಮ ವಹಿಸಲಾಗುವುದು. |
| ಇ) | ಸರ್ಕಾರವು ಬಸವನಬಾಗೇವಾಡಿ ತಾಲ್ಲೂಕಿನ ಯರನಾಳ ಸಿದ್ದನಾಥ ಮತ್ತು ತಳೇವಾಡ ಗ್ರಾಮಗಳಲ್ಲಿ ಹೊಸ ಪ್ರಾಥಮಿಕ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡಲು ಮತ್ತು ಬಿಸನಾಳ ಪಶುಚಿಕಿತ್ಸಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸಲು ಯಾವ ಕ್ರಮಕೈಗೊಳ್ಳಲಾಗಿದೆ; | ಪ್ರಸಕ್ತ ಸಾಲಿನಲ್ಲಿ ನೂತನವಾಗಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸುವ ಯಾವುದೇ ಯೋಜನೆ ಸರ್ಕಾರದ ಮುಂದಿರುವುದಿಲ್ಲ. ಆದರೆ, ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೇಗೇರಿಸುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಅದ್ಯತೆ ಮೇರೆಗೆ ಬಿಸನಾಳ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸಲು ಅಗತ್ಯ ಕ್ರಮವಹಿಸಲಾಗುವುದು. |
| ಈ) | ಯಾವ ಕಾಲಮಿತಿಯಲ್ಲಿ ಬೇಡಿಕೆಗಳನ್ನು ಈಡೇರಿಸಲಾಗುವುದು? | ಅವಶ್ಯಕತೆಗನುಗುಣವಾಗಿ ಅದ್ಯತೆ ಮೇರೆಗೆ ನಿಯಮಾನುಸಾರ ಬೇಡಿಕೆಗಳನ್ನು ಈಡೇರಿಸಲು ಕ್ರಮವಹಿಸಲಾಗುವುದು. |

ಸಂ: ಪಸಂಮೀ ಇ-185 ಪಸಸೇ 2020

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | | 607 |
| ಸದಸ್ಯರ ಹೆಸರು | : | ಶ್ರೀ ಅಜಯ್ ಧರ್ಮಸಿಂಗ್ ಡಾ|| (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | : | 09/12/2020 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ, ಜವಳಿ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಈ ಹಿಂದೆ ರಾಜ್ಯದಲ್ಲಿನ ಅಲ್ಪಸಂಖ್ಯಾತರ ಅಭ್ಯರ್ಥಿಗಳು P.hd&M.Phil ವ್ಯಾಸಂಗ ಮಾಡುವವರಿಗೆ ಜೆ.ಆರ್.ಎಫ್ ಮಾದರಿಯಲ್ಲಿ ಕ್ರಮವಾಗಿ ಎರಡು ವರ್ಷಗಳ ಅವಧಿಗೆ ಮಾಹೆಯಾನ ರೂ.25,000/- ಹಾಗೂ ವರ್ಷಕ್ಕೆ ಒಂದು ಬಾರಿ ರೂ.10,000/- ಗಳ ನಿರ್ವಹಣಾ ವೆಚ್ಚವನ್ನು ಶಿಷ್ಯ ವೇತನದ ಭರಿಸುತ್ತಿದ್ದುದು ನಿಜವಲ್ಲವೇ: | ಹೌದು |
| ಆ | ಹಾಗಿದ್ದಲ್ಲಿ, ಸದರಿ ವಿದ್ಯಾರ್ಥಿಗಳಿಗೆ ಜೆ.ಆರ್.ಎಫ್ ಮಾದರಿಯಲ್ಲಿ ಎರಡು ವರ್ಷಗಳ ಅವಧಿಗೆ ಮಾತ್ರ ವಾರ್ಷಿಕ ರೂ.1.00 ಲಕ್ಷವನ್ನು ನೀಡಲು ದಿನಾಂಕ: 24/01/2017 ಆದೇಶ ಹೊರಡಿಸಿ, ಪರಿಷ್ಕರಿಸುವುದಕ್ಕೆ ಕಾರಣಗಳೇನು: | ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಶುಲ್ಕ ಮರುಪಾವತಿ ಯೋಜನೆಯಡಿ (1) ಮೆಟ್ರಿಕ್ ಪೂರ್ವ,(2) ಮೆಟ್ರಿಕ್ ನಂತರ, (3) ಮೆರಿಟ್ ಕಮ್ ಮೀನ್ಸ್ ವಿದ್ಯಾರ್ಥಿವೇತನ, (4) ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ (5) ಎಂಫಿಲ್ ಮತ್ತು ಪಿಹೆಚ್‌ಡಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವು ನೀಡುವ ಕಾರ್ಯಕ್ರಮವಿದೆ.<br><br>ಈ ಹಿಂದಿನ ವರ್ಷಗಳಲ್ಲಿ ಮೇಲಿನ ವಿದ್ಯಾರ್ಥಿವೇತನಗಳಿಗೆ ಈ ಕೆಳಕಂಡಂತೆ ಆಯವ್ಯಯವನ್ನು ಒದಗಿಸಲಾಗಿತ್ತು.<br><br>(ರೂ. ಕೋಟಿಗಳಲ್ಲಿ)<br>ವರ್ಷ — ಆಯವ್ಯಯ<br>2017–18 — 290.00<br>2018–19 — 290.00<br>2019–20 — 275.00<br>2019–20 ಪರಿಷ್ಕೃತ — 125.00<br><br>ಹಿಂದಿನ ವರ್ಷಗಳಲ್ಲಿ ವಿದ್ಯಾರ್ಥಿವೇತನಕ್ಕಾಗಿ ಸಂಪೂರ್ಣ ಅನುದಾನ ನೀಡುತ್ತಿದ್ದರಿಂದ ಎಂಫಿಲ್ & ಪಿಹೆಚ್‌ಡಿ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ. 25,000/–ಗಳನ್ನು ಹಾಗೂ ವಾರ್ಷಿಕ ನಿರ್ವಹಣೆಗೆ ರೂ. 10,000/–ಗಳನ್ನು 3 ವರ್ಷಗಳಿಗೆ ನೀಡಲಾಗಿದೆ. |

| | | |
|---|---|---|
| | | ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಯಡಿ ಕೇವಲ ರೂ. 100.00 ಕೋಟಿಗಳ ಆಯವ್ಯಯವನ್ನು ಒದಗಿಸಿದ್ದರಿಂದ ಅನುದಾನದ ಕೊರತೆಯಿಂದಾಗಿ ಸರ್ಕಾರದಿಂದ ಆದೇಶವನ್ನು ಪರಿಷ್ಕರಿಸಿ ಹೊರಡಿಸಲಾಗಿದೆ. |
| ಇ | ಸದರಿ ಶಿಷ್ಯವೇತನದ ಪರಿಷ್ಕರಣೆಯಿಂದ ಉನ್ನತ ವ್ಯಾಸಂಗ ನಡೆಸುತ್ತಿರುವ ಬಡ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ತೊಂದರೆಯುಂಟಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ಹೌದು. ಹಲವು ಅಲ್ಪಸಂಖ್ಯಾತರ ವಿದ್ಯಾರ್ಥಿಗಳು ಈ ಬಗ್ಗೆ ಮನವಿಯನ್ನು ಸಲ್ಲಿಸಿರುತ್ತಾರೆ. |
| ಈ | ಉನ್ನತ ವ್ಯಾಸಂಗದಲ್ಲಿನ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ಹೊರತುಪಡಿಸಿ ಇನ್ನಿತರ ವಿದ್ಯಾರ್ಥಿಗಳು INSPIRE, CSIR, GOI, Moulana ಇವುಗಳಿಂದ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಶಿಷ್ಯ ವೇತನ ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: (ವಿವರ ನೀಡುವುದು) | ಉನ್ನತ ವ್ಯಾಸಂಗದಲ್ಲಿನ ವಿದ್ಯಾರ್ಥಿಗಳನ್ನು ವಿದ್ಯಾರ್ಥಿಗಳಿಗೆ ಕೇಂದ್ರ ಸರ್ಕಾರದಿಂದ ನೀಡುತ್ತಿರುವ ಅನುದಾನದ ವಿವರ ಈ ಕೆಳಕಂಡಂತಿದೆ. (see table below) |
| ಉ | ಹಾಗಿದ್ದಲ್ಲಿ, ಈ ತಾರತಮ್ಯವನ್ನು ಸರಿಪಡಿಸಿ, P.hd&M.Phil ವ್ಯಾಸಂಗ ನಡೆಸುತ್ತಿರುವ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಸಂಶೋಧನಾ ಹಾಗೂ ಇನ್ನಿತರ ನಿರ್ವಹಣಾ ವೆಚ್ಚವನ್ನು ಭರಿಸಲು ಅವರುಗಳ ಶಿಷ್ಯವೇತನವನ್ನು ಹೆಚ್ಚಿಸುವ ನಿರ್ಧಾರವನ್ನು ಸರ್ಕಾರ ಕೈಗೊಳ್ಳುವುದೇ? (ವಿವರ ನೀಡುವುದು) | ಶಿಷ್ಯ ವೇತನವನ್ನು ಹೆಚ್ಚಿಸುವ ಕುರಿತು ಪ್ರಸ್ತಾವನೆಯು ಸರ್ಕಾರದ ಪರಿಶೀಲನಾ ಹಂತದಲ್ಲಿದೆ. |

| | | |
|---|---|---|
| 1 | INSPIRE | ವಿಶ್ವ ವಿದ್ಯಾನಿಲಯದಲ್ಲಿ <u>ಪ್ರಥಮ ಸ್ಥಾನ</u> ಪಡೆದಿರುವ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ. 25,000/- |
| 2 | CSIR | ಕೇಂದ್ರ ಸರ್ಕಾರದಿಂದ <u>NET ಪರೀಕ್ಷೆಯಲ್ಲಿ ಉತ್ತೀರ್ಣರಾದ</u> ವಿದ್ಯಾರ್ಥಿಗಳಿಗೆ ಮಾಹೆಯಾನ ರೂ. 31,000/-ಗಳು. |
| 3 | Moulana | <u>ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ</u> ಕೇಂದ್ರ ಸರ್ಕಾರದಿಂದ ಮಾಹೆಯಾನ ರೂ. 25,000/-ಗಳನ್ನು ನೀಡಲಾಗುತ್ತಿದೆ. |

ಸಂಖ್ಯೆ: MWD 162 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | :: | 617 |
| ಸದಸ್ಯರ ಹೆಸರು | :: | ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ. ಕೋಟೆ) |
| ಉತ್ತರಿಸುವ ದಿನಾಂಕ | :: | 09.12.2020 |
| ಉತ್ತರಿಸುವ ಸಚಿವರು | :: | ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕರ್ನಾಟಕ ಪಶುವೈದ್ಯಕೀಯ ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಅಡಿ ಬರುವ ಮೀನುಗಾರಿಕೆ ಕಾಲೇಜಿನಲ್ಲಿ AICRP ಯೋಜನೆ ಅನುಷ್ಠಾನ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸದರಿ ವಿಷಯವು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಹಾಗಿದ್ದಲ್ಲಿ, AICRP ಯೋಜನೆಗೆ Contractual coterminus ಆಧಾರದ ಮೇಲೆ ನೇಮಿಸಿಕೊಂಡ ಸಿಬ್ಬಂದಿಗಳಿಗೆ ಖಾಯಂ ನೌಕರರಂತೆ ವೇತನ ಶ್ರೇಣಿ, ವಾರ್ಷಿಕ ವೇತನ ಮುಂಬಡ್ತಿ ಹಾಗೂ ಇತರೆ ಸೌಲಭ್ಯಗಳನ್ನು ನಿಯಮಬಾಹಿರವಾಗಿ ನೀಡುತ್ತಿರುವುದು ನಿಜವೇ; ಹಾಗಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | ಈ ಯೋಜನೆಯು 2010 ನೇ ಸಾಲಿನಿಂದ ಕಾರ್ಯನಿರ್ವಹಿಸುತ್ತಿದ್ದು, ಪ್ರಧಾನ ಸಂಶೋಧಕರು ಮೀನುಗಾರಿಕೆ ಮಹಾವಿದ್ಯಾಲಯ, ಮಂಗಳೂರು ಇವರ ಪ್ರಸ್ತಾವನೆಯಂತೆ 37ನೇ ವ್ಯವಸ್ಥಾಪಕ ಮಂಡಳಿಯ ಅನುಮೋದನೆ ಮತ್ತು ದಿನಾಂಕ 01-06-2010 ರ ಮತ್ತು ದಿನಾಂಕ 14-11-2018 ರ ಕುಲಸಚಿವರ ಆದೇಶದಂತೆ ಸಿಬ್ಬಂದಿಯನ್ನು Contractual coterminus (ಯೋಜನೆ ಮುಗಿಯುವವರೆಗೆ) ಆಧಾರದ ಮೇಲೆ ನೇಮಕ ಮಾಡಿಕೊಂಡಿದ್ದು, ಐಸಿಎಆರ್-ಎಐಸಿಆರ್‌ಪಿ ಮತ್ತು ವಿಶ್ವವಿದ್ಯಾಲಯದ ಒಡಂಬಡಿಕೆಯ ಪ್ರಕಾರ ವೇತನ ನೀಡಲಾಗಿದೆ. ಈ ಯೋಜನೆಯು 2010 ರಿಂದಲೂ ನಿರಂತರವಾಗಿ ನಡೆದುಕೊಂಡು ಮುಂದುವರೆಯುತ್ತಿರುವುದರಿಂದ ಸಿಬ್ಬಂದಿಗಳಿಗೆ ಒಡಂಬಡಿಕೆಯ ಪ್ರಕಾರ ಹಾಗೂ ಈ ಯೋಜನೆಯ ಪ್ರಧಾನ ಸಂಶೋಧಕರ ಪ್ರಸ್ತಾವನೆಯಂತೆ ವೇತನ ಮತ್ತು ಇತರೆ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಇದೇ ರೀತಿ ಪಶ್ಚಿಮ ಬಂಗಾಳ ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲೂ ವೇತನ ನೀಡಲಾಗುತ್ತಿದೆ. |

| | | |
|---|---|---|
| ಇ) | ಈ ಯೋಜನೆಗೆ 75% ಅನುದಾನವನ್ನು Funding agency ಯಿಂದ ಹಾಗೂ 25% ರಾಜ್ಯ ಸರ್ಕಾರದಿಂದ ನೀಡುತ್ತಿದ್ದು, ನಿಯಮ ಬಾಹಿರವಾಗಿ ನೀಡುತ್ತಿರುವ ವೇತನ ಶ್ರೇಣಿ, ವಾರ್ಷಿಕ ವೇತನ ಮುಂಬಡ್ತಿಗೆ ಆರ್ಥಿಕ ಇಲಾಖೆಯಿಂದ ಒಪ್ಪಿಗೆ ಪಡೆಯಲಾಗಿದೆಯೇ; (ವಿವರ ನೀಡುವುದು) | ಈ ಯೋಜನೆಗೆ ಸಂಬಂಧಿಸಿದ ಸಿಬ್ಬಂದಿ ವಿವರ, ವೇತನ, ಇತರೆ ಖರ್ಚುಗಳ ವಿವರವನ್ನು ಧನಸಹಾಯ ಸಂಸ್ಥೆಗೆ (ಐಸಿಎಆರ್) ನಿಯಮಿತವಾಗಿ ಸಲ್ಲಿಸಿದ್ದು ಹಾಗೂ ಆಡಿಟ್ ಯುಟಿಲೈಜೆಷನ್ ಪ್ರಮಾಣ ಪತ್ರವನ್ನು ದಿನಾಂಕ 2010ನೇ ಸಾಲಿನಿಂದ ಸಲ್ಲಿಸುತ್ತಿದ್ದು, ಧನಸಹಾಯ ಸಂಸ್ಥೆಯು ಅದನ್ನು ಪರಿಶೀಲಿಸಿ ವಿವಿಧ ಕಂತುಗಳಲ್ಲಿ ಹಣವನ್ನು ಬಿಡುಗಡೆ ಮಾಡುತ್ತಿದೆ. ರಾಜ್ಯ ಸರ್ಕಾರಕ್ಕೆ ಪ್ರತಿ ವರ್ಷವೂ ಈ ಯೋಜನೆಗಾಗಿ ಶೇ 25 ರಷ್ಟು ಬಜೆಟ್ ಕೋರುವ ಸಂದರ್ಭದಲ್ಲಿ ಈ ಸಿಬ್ಬಂದಿಗಳ ವಿವರ, ಯೋಜನೆಯ ಹೆಸರು ನಮೂದಿಸಿ ಕೋರಿಕೆ ಸಲ್ಲಿಸಲಾಗುತ್ತಿದೆ. ಅದರಂತೆ ಪ್ರತಿ ವರ್ಷವೂ ಸಹ ಹಣ ಬಿಡುಗಡೆಯಾಗಿದ್ದು ವೆಚ್ಚ ಮಾಡಲಾಗಿದೆ. |
| ಈ) | ನಿಯಮಬಾಹಿರವಾಗಿ ರಾಜ್ಯ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದವರ ಮೇಲೆ ಯಾವ ಕ್ರಮ ತೆಗೆದುಕೊಳ್ಳಲಾಗುವುದು ಹಾಗೂ ಈ ರೀತಿಯಾಗಿ ನೀಡುತ್ತಿರುವ ವೇತನ ಶ್ರೇಣಿ/ ವಾರ್ಷಿಕ ವೇತನ ಮುಂಬಡ್ತಿಯನ್ನು ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು; | ಈ ಯೋಜನೆಯಲ್ಲಿ ಆರ್ಥಿಕ ದುರ್ಬಳಕೆ ಆಗಿರುವುದಿಲ್ಲ. ಅನೇಕ ತಂತ್ರಜ್ಞಾನಗಳು ಅಭಿವೃದ್ಧಿಗೊಂಡಿವೆ. ಧನಸಹಾಯ ಸಂಸ್ಥೆಯು ಪ್ರತಿ ವರ್ಷವೂ ಈ ಕುರಿತು ವರದಿಯನ್ನು ಪರಿಶೀಲಿಸಿ ಪ್ರಗತಿಯ ಆಧಾರದ ಮೇಲೆ ಯೋಜನೆಯನ್ನು ಮುಂದುವರಿಸುತ್ತಿದೆ. ಆದಾಗ್ಯೂ ಈ ಯೋಜನೆಯ ಪ್ರಧಾನ ಸಂಶೋಧಕರು ಈಗ ನಿವೃತ್ತರಾಗಿದ್ದು ಖಾಯಂ ಹಾಗೂ ಸೂಕ್ತ ಸಿಬ್ಬಂದಿಗಳ ಕೊರತೆ ಇರುವುದರಿಂದ ಈ ಯೋಜನೆಯನ್ನು ನಿಲ್ಲಿಸಲು ಧನಸಹಾಯ ಸಂಸ್ಥೆಗೆ ಕೋರಿಕೆ ಸಲ್ಲಿಸಿದೆ. ಸದರಿ ಸಂಸ್ಥೆಯಿಂದ ನಿರ್ದೇಶನ ಬಂದ ತಕ್ಷಣ ಯೋಜನೆಯನ್ನು ನಿಲ್ಲಿಸಲಾಗುವುದು. |

**ಸಂಖ್ಯೆ: ಪಸಂಮೀ ಇ-262 ಪಅಸೇ 2020**

**(ಪ್ರಭು ಬಿ. ಚವ್ಹಾಣ್)**
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 629

ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯ ಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 09-12-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯಲ್ಲಿ ಒಟ್ಟು 13 ತಾಲ್ಲೂಕುಗಳನ್ನು ಒಳಗೊಂಡು ಅತ್ಯಂತ ದೊಡ್ಡ ಜಿಲ್ಲೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಕಂದಾಯ ಉಪ ವಿಭಾಗ ಹಾಗೂ ಜಿಲ್ಲೆಯಲ್ಲಿಯೇ 2ನೇ ದೊಡ್ಡ ಪಟ್ಟಣವಾಗಿರುವ ಹಾಗೂ ತಾಲ್ಲೂಕು ಕೇಂದ್ರವಾಗಿರುವ ಇಂಡಿ ಪಟ್ಟಣದಲ್ಲಿ ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಆಯುಕ್ತರ ಕಛೇರಿ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| (ಇ) | ಸದರಿ ಕಛೇರಿ ಇಲ್ಲದಿರುವುದರಿಂದ ಇಂಡಿ, ಚಡಚಣ, ಸಿಂಧಗಿ ಮತ್ತು ಆಲಮೇಲ ಈ ಭಾಗದ ಸಾರ್ವಜನಿಕರು ತಮ್ಮ ಮೋಟಾರ್ ಸೈಕಲ್, ಕಾರು, ಜೀಪು ಮೊದಲಾದ ಸಾರಿಗೆ ವಾಹನಗಳನ್ನು ನೋಂದಣಿ ಮಾಡಿಸಲು ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರಕ್ಕೆ ಹೋಗುತ್ತಿರುವುದನ್ನು ಸರ್ಕಾರ ಗಮನಿಸಿದೆಯೇ; | ಅಂತಹ ಪ್ರಕರಣಗಳು ಕಂಡುಬಂದಿರುವುದಿಲ್ಲ. ಆದಾಗ್ಯೂ ಪ್ರತಿ ತಿಂಗಳು ವಿಜಯಪುರ ಜಿಲ್ಲೆಯ ಸಾರ್ವಜನಿಕರ ಕೆಲಸ ಕಾರ್ಯಗಳಿಗೆ ಯಾವುದೇ ತೊಂದರೆಯಾಗದಂತೆ ಈ ಕೆಳಕಂಡಂತೆ ಶಿಬಿರಗಳನ್ನು ನಡೆಸಲಾಗುತ್ತಿದೆ. |

| ಕ್ರ. ಸಂ. | ಸ್ಥಳ | ದಿನಾಂಕ |
|---|---|---|
| 1. | ಇಂಡಿ | 2ನೇ ತಾರೀಖು |
| 2. | ಸಿಂಧಗಿ | 4ನೇ ತಾರೀಖು |
| 3. | ಮುದ್ದೇಬಿಹಾಳ | 7ನೇ ತಾರೀಖು |
| 4. | ಕೋಲಾರ | 10ನೇ ತಾರೀಖು |
| 5. | ಬಸವನಬಾಗೇವಾಡಿ | 14ನೇ ತಾರೀಖು |
| 6. | ಆಲಮಟ್ಟಿ | 17ನೇ ತಾರೀಖು |
| 7. | ತಾಳಿಕೋಟೆ | 25ನೇ ತಾರೀಖು |

| | | |
|---|---|---|
| (ಈ) | ಸೊಲ್ಲಾಪುರದಲ್ಲಿ ನೋಂದಾಯಿಸಿ ಕರ್ನಾಟಕದಲ್ಲಿ ಸಂಚರಿಸುತ್ತಿರುವುದರಿಂದ ರಾಜ್ಯದ ಬೊಕ್ಕಸಕ್ಕೆ ನಷ್ಟ ಉಂಟಾಗುವುದಿಲ್ಲವೇ; | ವಿಜಯಪುರ ಜಿಲ್ಲೆಯ ತಾಲ್ಲೂಕುಗಳಲ್ಲಿ ಪ್ರತಿ ತಿಂಗಳು ಶಿಬಿರಗಳನ್ನು ನಡೆಸಲಾಗುತ್ತಿರುವುದರಿಂದ ವಾಹನಗಳು ಸೊಲ್ಲಾಪುರದಲ್ಲಿ ನೋಂದಣಿಯಾಗುವ ಪ್ರಮೇಯ ಉಂಟಾಗುವುದಿಲ್ಲ. |
| (ಉ) | ಹಾಗಾದರೆ, ಸಾರ್ವಜನಿಕರಿಗೆ ಅನುಕೂಲವಾಗುವಂತೆ ಹಾಗೂ ರಾಜ್ಯ ಸರ್ಕಾರದ ಬೊಕ್ಕಸಕ್ಕೆ ಆದಾಯ ಹೆಚ್ಚಿಸಲು ಅನುಕೂಲವಾಗುವಂತೆ ಇಂಡಿ ಪಟ್ಟಣದಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸಲು ಪ್ರಸ್ತಾವನೆಯು ಸರ್ಕಾರಕ್ಕೆ ಬಂದಿರುವುದು ನಿಜವೇ; ಬಂದಿದ್ದಲ್ಲಿ, ಇದುವರೆಗೂ ಮಂಜೂರಾತಿ ನೀಡದಿರಲು ಕಾರಣಗಳೇನು; | ವಿಜಯಪುರ ಜಿಲ್ಲೆಯ ಇಂಡಿ ಅಥವಾ ಸಿಂಧಗಿ ಪಟ್ಟಣದಲ್ಲಿ ಹೊಸ ಕಛೇರಿಯನ್ನು ಪ್ರಾರಂಭಿಸುವ ಕುರಿತು ಪ್ರಸ್ತಾವನೆ ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿರುತ್ತದೆ. |
| (ಊ) | ಸದರಿ ಕಛೇರಿಯನ್ನು ಪ್ರಾರಂಭಿಸಲು ಸರ್ಕಾರಕ್ಕೆ ಆಸಕ್ತಿ ಇದೆಯೇ; ಇದ್ದಲ್ಲಿ, ಯಾವಾಗ ಮತ್ತು ಯಾವ ಕಾಲಮಿತಿಯೊಳಗೆ ಮಂಜೂರಾತಿ ನೀಡಲಾಗುವುದು? (ವಿವರ ನೀಡುವುದು) | |

ಟಿಡಿ 102 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 630 |
| ವಿಧಾನ ಪರಿಷತ್ ಸದಸ್ಯರು | : | ಶ್ರೀ ಮಂಜುನಾಥ ಎ (ಮಾಗಡಿ) |
| ಉತ್ತರಿಸುವ ದಿನಾಂಕ | : | 09.12.2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಹಾಲು ಉತ್ಪಾದಕರ ಸಹಕಾರ ಸಂಘದಿಂದ ಪ್ರತಿ ನಿತ್ಯ ಹೊರ ರಾಜ್ಯಗಳಿಗೆ ಹಾಲನ್ನು ರಫ್ತು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಹಾಗಿದ್ದಲ್ಲಿ, ಯಾವ ಯಾವ ರಾಜ್ಯಗಳಿಗೆ ಎಷ್ಟೆಷ್ಟು ಪ್ರಮಾಣದಲ್ಲಿ ಪ್ರತಿ ನಿತ್ಯ ಹಾಲನ್ನು ರಫ್ತು ಮಾಡಲಾಗುತ್ತಿದೆ; ನಿಗಧಿಪಡಿಸಿರುವ ದರ ಎಷ್ಟು (ಸಂಪೂರ್ಣ ಮಾಹಿತಿ ನೀಡುವುದು); | ಬೆಂಗಳೂರು ಹಾಲು ಒಕ್ಕೂಟವು ಆಂಧ್ರಪ್ರದೇಶದ ಸಹಕಾರ ಡೇರಿ ಸಂಸ್ಥೆ ವಿಶಾಖ ಡೇರಿಗೆ ಪ್ರತಿ ನಿತ್ಯ ಸರಾಸರಿ ಅಂದಾಜು 20,000 ಲೀಟರ್ ಹಾಲನ್ನು ಸಗಟು ರೂಪದಲ್ಲಿ ಪ್ರತಿ ಲೀಟರ್ ಹಾಲಿಗೆ ರೂ.28.50/- ಎಕ್ಸ್ ಡೈರಿ ದರದಲ್ಲಿ ಟ್ಯಾಂಕರ್ ಮೂಲಕ ಮಾರಾಟ ಮಾಡಲಾಗುತ್ತಿದೆ. |
| ಇ | ಬೆಂಗಳೂರು ಹಾಲು ಉತ್ಪಾದಕರ ಸಹಕಾರ ಸಂಘದಿಂದ ತಮಿಳುನಾಡಿಗೆ ಸರಬರಾಜು ಆಗುತ್ತಿರುವ ಹಾಲಿಗೆ ನಂದಿನಿ ಹಾಲಿನ ಬ್ರಾಂಡ್ ಹಾಕಿ ಹಾಲನ್ನು ಮಾರಾಟ ಮಾಡಲಾಗುತ್ತಿದೆಯೇ; ತಮಿಳುನಾಡಿಗೆ ಹಾಲನ್ನು ಸರಬರಾಜು ಮಾಡುವ ಒಪ್ಪಂದದಲ್ಲಿ ನಂದಿನಿ ಹಾಲಿನ ಬ್ರಾಂಡ್ ಅನ್ನು ನಮೂದಿಸಲು ಷರತ್ತು ವಿಧಿಸಲಾಗಿದೆಯೇ; ಹಾಗಿದ್ದಲ್ಲಿ ಸರಬರಾಜು ಮಾಡುತ್ತಿರುವ ಹಾಲಿಗೆ ನಂದಿನಿ ಹಾಲಿನ ಬ್ರಾಂಡ್ ಅನ್ನು ಅಳವಡಿಸಿಕೊಳ್ಳದೇ ವಿವಿಧ ಖಾಸಗಿ ಸಂಸ್ಥೆಗಳು ಪುನಃ ಅದೇ ಹಾಲನ್ನು ಪ್ಯಾಕೇಟಿನ ಮೇಲೆ ಬೇರೆ ಬೇರೆ ಬ್ರಾಂಡ್‌ಗಳನ್ನು ನಮೂದಿಸಿ ದರ ನಿಗಧಿಪಡಿಸಿ ಕರ್ನಾಟಕಕ್ಕೆ ಸರಬರಾಜು ಮಾಡಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಖಾಸಗಿ ಸಂಸ್ಥೆಗಳ ಸಂಪೂರ್ಣ ಮಾಹಿತಿಯನ್ನು ಒದಗಿಸುವುದು; | ಬೆಂಗಳೂರು ಹಾಲು ಒಕ್ಕೂಟದ ವತಿಯಿಂದ ನಂದಿನಿ ಬ್ರಾಂಡ್‌ನಲ್ಲಿಯೇ ಹಾಲನ್ನು ಬೆಂಗಳೂರು ಡೇರಿ ಘಟಕದಲ್ಲಿ ಪ್ಯಾಕ್ ಮಾಡಿ ರೆಫ್ರಿಜರೇಟೆಡ್ ವಾಹನದ ಮೂಲಕ ಸಾಗಾಣಿಕೆ ಮಾಡಿ ತಮಿಳುನಾಡಿಗೆ ದಿನಾಂಕ:22.10.2020ರ ವರೆಗೆ ಸರಬರಾಜು ಮಾಡಲಾಗಿದ್ದು, ದಿನಾಂಕ:23.10.2020 ರಿಂದ ಹಾಲು ಮಾರಾಟವನ್ನು ಸ್ಥಗಿತ ಮಾಡಲಾಗಿರುತ್ತದೆ.<br><br>ಕರ್ನಾಟಕ ಹಾಲು ಮಹಾಮಂಡಳಿಯು, ಪ್ರಸ್ತುತ ಸಹಕಾರಿ ಡೈರಿಗಳಿಗೆ ಹೊರತುಪಡಿಸಿ ಯಾವುದೇ ಖಾಸಗಿ ವ್ಯಕ್ತಿಗಳಿಗೆ ಮತ್ತು ಖಾಸಗಿ ಡೈರಿಗಳಿಗೆ ಹಾಲನ್ನು ಸಗಟು ರೂಪದಲ್ಲಿ ಮಾರಾಟ ಮಾಡುತ್ತಿರುವುದಿಲ್ಲ. |

| | | |
|---|---|---|
| ಈ | ತಮಿಳುನಾಡಿನಿಂದ ಖಾಸಗಿ ಸಂಸ್ಥೆಗಳು ಕರ್ನಾಟಕಕ್ಕೆ ಸರಬರಾಜು ಮಾಡುತ್ತಿರುವ ಹಾಲನ್ನು ತಡೆಗಟ್ಟುವ ಉದ್ದೇಶ ಸರ್ಕಾರಕ್ಕೆ ಇದೆಯೇ? ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |

**ಪಸಂಮೀ ಇ-297 ಸಲೆವಿ 2020**

**(ಪ್ರಭು ಬಿ. ಚವ್ಹಾಣ್)**
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು

## ಕರ್ನಾಟಕ ವಿಧಾನಸಭೆ

1. ಸದಸ್ಯರ ಹೆಸರು : ಶ್ರೀ ಮಂಜುನಾಥ್. ಎ. (ಮಾಗಡಿ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 631
3. ಉತ್ತರಿಸಬೇಕಾದ ದಿನಾಂಕ : 09-12-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ಮಾಗಡಿ ವಿಧಾನ ಸಭಾ ಕ್ಷೇತ್ರಕ್ಕೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ವಿವಿಧ ಕಾಮಗಾರಿಗಳಿಗೆ ಬಿಡುಗಡೆಯಾದ ಅನುದಾನ ಎಷ್ಟು; | (ರೂ ಲಕ್ಷಗಳಲ್ಲಿ)<br>**ವರ್ಷ** / **ಮಾಗಡಿ** / **ನೆಲಮಂಗಲ**<br>2018-19 / 3548.79 / 397.38<br>2019-20 / 5484.57 / 611.47<br>2020-21 / 5050.79 / 595.97 |
| ಆ) | ಸದರಿ ಅವಧಿಯಲ್ಲಿ ಕಾಮಗಾರಿಗಳ ಸಾಮಾಗ್ರಿಗಳ ಖರೀದಿಗಾಗಿ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, |
| ಇ) | ಬಂದಿದ್ದಲ್ಲಿ, ಬಿಡುಗಡೆಯಾಗದಿರುವುದಕ್ಕೆ ಕಾರಣಗಳೇನು; ಎಷ್ಟು ಬಾಕಿ ಅನುದಾನ ಬಿಡುಗಡೆ ಮಾಡಬೇಕಾಗಿರುತ್ತದೆ; ಬಾಕಿ ಉಳಿಸಿಕೊಂಡಿರುವ ಅನುದಾನವನ್ನು ಯಾವ ಕಾಲಮಿತಿಯೊಳಗೆ ಬಿಡುಗಡೆ ಮಾಡಲು ಕ್ರಮ ಜರುಗಿಸಲಾಗುವುದು? | i) ಮಹಾತ್ಮ ಗಾಂಧಿ ನರೇಗಾ ಯೋಜನೆಯ ಮಾರ್ಗಸೂಚಿಗಳಂತೆ ಜಿಲ್ಲೆಯ ಒಟ್ಟು ಸಾಮಗ್ರಿ ಅನುಪಾತವು ಶೇ. 40 ರ ಮಿತಿಯೊಳಗೆ ಇರಬೇಕು. ಶೇ. 40 ಕ್ಕಿಂತ ಹೆಚ್ಚು ಸಾಮಗ್ರಿ ವೆಚ್ಚ ಭರಿಸಿದಲ್ಲಿ ಯೋಜನೆಯ ಮಾರ್ಗಸೂಚಿಯಂತೆ ಅನುದಾನ ಬಿಡುಗಡೆ ಮಾಡಲು ಸಾಧ್ಯವಿಲ್ಲ. 2018-19 ರಲ್ಲಿ 07 ಮತ್ತು 2019-20 ರಲ್ಲಿ 12 ಜಿಲ್ಲೆಗಳು ಸಾಮಗ್ರಿ ಅನುಪಾತ ಉಲ್ಲಂಘನೆ ಮಾಡಿದ ಕಾರಣ ಸಾಮಗ್ರಿ ವೆಚ್ಚ ಬಿಡುಗಡೆ ಸಾಧ್ಯವಾಗಿರುವುದಿಲ್ಲ.<br><br>ii) ಮಾಗಡಿ ವಿಧಾನ ಸಭಾ ಕ್ಷೇತ್ರಕ್ಕೆ ಬಿಡುಗಡೆ ಮಾಡಲು ಬಾಕಿ ಇರುವ ಸಾಮಗ್ರಿ ವೆಚ್ಚ.<br>2018-19 ರಲ್ಲಿ ರೂ. 453.65 ಲಕ್ಷ<br>2019-20 ರಲ್ಲಿ ರೂ. 28.27 ಲಕ್ಷ<br>2020-21 ರಲ್ಲಿ ರೂ. 1245.26 ಲಕ್ಷ<br>2018-19 ನೇ ಸಾಲಿನಲ್ಲಿ ಜಿಲ್ಲೆಯ ಸಾಮಗ್ರಿ ಅನುಪಾತ ಉಲ್ಲಂಘನೆಯಾದ ಕಾರಣ ಸಾಮಗ್ರಿ ವೆಚ್ಚ ಬಿಡುಗಡೆ ಸಾಧ್ಯವಾಗಿರುವುದಿಲ್ಲ.<br><br>iii) ಸಾಮಗ್ರಿ ಬಿಲ್ಲುಗಳನ್ನು ನರೇಗಾ ತಂತ್ರಾಂಶದಲ್ಲಿ ಅಪ್‌ಲೋಡ್ ಮಾಡಿದ ನಂತರ Fund Transfer Order ಗಳನ್ನು ಸೃಜನೆ ಮಾಡಲು ಅವಕಾಶ ನೀಡಲಾಗುತ್ತದೆ. ಈ ರೀತಿ ಸೃಜನೆ ಮಾಡಲಾದ Fund Transfer Order ಗಳಿಗೆ ಸಂಬಂಧಿಸಿದ ಕಾಮಗಾರಿಗಳ ಗುಣಮಟ್ಟವನ್ನು ವಿವಿಧ ಹಂತಗಳಲ್ಲಿ ಪರಿಶೀಲನೆ ನಡೆಸಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ |

| | | |
|---|---|---|
| | | ಅಧಿಕಾರಿಗಳು ಅನುದಾನ ಬಿಡುಗಡೆಗೆ ಕೋರಿಕೆ ಸಲ್ಲಿಸಿದ ತಕ್ಷಣವೇ ಸಾಮಗ್ರಿ ವೆಚ್ಚ ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ. ಈ ವರ್ಷದಲ್ಲಿ ಈಗಾಗಲೇ ಮಾಗಡಿ ತಾಲ್ಲೂಕಿಗೆ ರೂ. 6.93 ಕೋಟಿ ಸಾಮಗ್ರಿ ವೆಚ್ಚ ಪಾವತಿಯಾಗಿರುತ್ತದೆ. |

ಸಂಖ್ಯೆ: ಗ್ರಾಅಪ 38(254) ಉಖಾಯೋ 2019

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ.ರೇವಣ್ಣ.ಹೆಚ್.ಡಿ (ಹೊಳೇನರಸೀಪುರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 638

ಉತ್ತರಿಸಬೇಕಾದ ದಿನಾಂಕ : 09.12.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ನಗರದಲ್ಲಿರುವ ಸರ್ಕಾರಿ ಪಶುವೈದ್ಯಕೀಯ ಕಾಲೇಜಿಗೆ ಮೂಲಭೂತ ಸೌಕರ್ಯಗಳ ಕಾಮಗಾರಿಗಳಾದ ಹಾಸನದ ಪಶುವೈದ್ಯಕೀಯ ಕಾಲೇಜಿನ ಆವರಣದಲ್ಲಿ ಬಾಲಕಿಯರ ವಸತಿ ನಿಲಯದ 2ನೇ ಮಹಡಿ ನಿರ್ಮಾಣ, ಅಡಿಟೋರಿಯಂ ಕಟ್ಟಡ ನಿರ್ಮಾಣ, ಸಂಪರ್ಕ ರಸ್ತೆಗಳು, ಬಿ ಮತ್ತು ಸಿ ಮಾದರಿ ವಸತಿಗೃಹಗಳ ನಿರ್ಮಾಣ, ಜಾನುವಾರು ಶವಾಗಾರ ಕಟ್ಟಡ ನಿರ್ಮಾಣ, ಜಾನುವಾರು ಆಸ್ಪತ್ರೆ ಕಟ್ಟಡ ನಿರ್ಮಾಣ ಹಾಗೂ ಶೆಡ್‌ಗಳ ನಿರ್ಮಾಣ ಕಾಮಗಾರಿಗಳಿಗಾಗಿ ರೂ.23.00 ಕೋಟಿಗಳ ಮೊತ್ತದ ಅಂದಾಜಿನ ಪ್ರಸ್ತಾವನೆಯನ್ನು ಮುಖ್ಯ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನಾ ಇಲಾಖೆ, ಇವರಿಗೆ ಆಡಳಿತಾತ್ಮಕ ಅನುಮೋದನೆ ನೀಡಿ, ಅನುದಾನವನ್ನು ಬಿಡುಗಡೆಗೊಳಿಸಲು ಸಲ್ಲಿಸಿರುವ ಅವಶ್ಯಕ ಅನುದಾನವನ್ನು ಬಿಡುಗಡೆಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: | ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರನ ಅಂಗ ಸಂಸ್ಥೆಯಾದ ಹಾಸನದ ಪಶುವೈದ್ಯಕೀಯ ಕಾಲೇಜಿಗೆ ಮೂಲಭೂತ ಸೌಕರ್ಯಗಳಾದ ಬಾಲಕಿಯರ ವಸತಿ ನಿಲಯದ 2ನೇ ಮಹಡಿ ನಿರ್ಮಾಣ, ಆಡಿಟೋರಿಯಂ ಕಟ್ಟಡ ನಿರ್ಮಾಣ, ಸಂಪರ್ಕ ರಸ್ತೆಗಳು, ಬಿ ಮತ್ತು ಸಿ ಮಾದರಿ ವಸತಿ ಗೃಹಗಳ ನಿರ್ಮಾಣ, ಜಾನುವಾರು ಶವಾಗಾರ ಕಟ್ಟಡ ನಿರ್ಮಾಣ, ಜಾನುವಾರು ಆಸ್ಪತ್ರೆ ಕಟ್ಟಡ ನಿರ್ಮಾಣ ಹಾಗೂ ಶೆಡ್‌ಗಳ ನಿರ್ಮಾಣ ಕಾಮಗಾರಿಗಳಿಗಾಗಿ ಮುಖ್ಯ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರು ನೀಡಿದ ರೂ.23.00 ಕೋಟಿಗಳ ಮೊತ್ತದ ಅಂದಾಜಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತದೆ. ಅಗತ್ಯ ಮಾಹಿತಿ ಮತ್ತು ದಾಖಲೆಗಳನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ನಂದಿನಗರ, ಬೀದರ್ ಇವರಿಂದ ಪಡೆಯಲು ಕ್ರಮವಹಿಸಲಾಗಿರುತ್ತದೆ. ಸದರಿ ಮಾಹಿತಿ ಮತ್ತು ದಾಖಲೆಗಳು |

| | | |
|---|---|---|
| | | ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ ಅನುದಾನ ಬಿಡುಗಡೆಗೊಳಿಸಲು ಕ್ರಮವಹಿಸಲಾಗುವುದು. |
| ಆ | ಹಾಸನ ತಾಲ್ಲೂಕಿನ ಸರ್ಕಾರಿ ಪಶುವೈದ್ಯಕೀಯ ಕಾಲೇಜಿನ ಹಂತ-4 ರ ಕಾಮಗಾರಿಗಳಿಗಾಗಿ ರೂ.23.00 ಕೋಟಿಗಳ ಅನುದಾನವನ್ನು ಬಿಡುಗಡೆಗೊಳಿಸಲು ಯಾವ ಕಾಲಮಿತಿಯೊಳಗೆ ಸರ್ಕಾರ ಕ್ರಮ ಕೈಗೊಳ್ಳುವುದು? (ಸಂಪೂರ್ಣ ಮಾಹಿತಿ ನೀಡುವುದು). | ಪ್ರಸ್ತಾವನೆಗೆ ಸಂಬಂಧಿಸಿದಂತೆ ಅಗತ್ಯ ಮಾಹಿತಿ ಮತ್ತು ದಾಖಲೆಗಳನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ನಂದಿನಗರ, ಬೀದರ್ ಇವರಿಂದ ಪಡೆಯಲು ಕ್ರಮವಹಿಸಲಾಗಿರುತ್ತದೆ. ಸದರಿ ಮಾಹಿತಿ ಮತ್ತು ದಾಖಲೆಗಳು ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ ಅನುದಾನ ಬಿಡುಗಡೆಗೊಳಿಸಲು ಕ್ರಮವಹಿಸಲಾಗುವುದು. |

**ಪಸಂಮೀ ಇ-301 ಸಲೆವಿ 2020**

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

# ಕರ್ನಾಟಕ ವಿಧಾನ ಸಭೆ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 647 |
| **ಸದಸ್ಯರ ಹೆಸರು** | ಶ್ರೀ ಸಂಜೀವ ಮಠಂದೂರ್ (ಪುತ್ತೂರು) |
| **ಉತ್ತರಿಸಬೇಕಾದ ದಿನಾಂಕ** | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಗ್ರಾಮೀಣ ರಸ್ತೆಗಳ ನಿರ್ವಹಣೆ ಹಾಗೂ ಸುಧಾರಣೆಗಾಗಿ "ಸುಮಾರ್ಗ" ಯೋಜನೆಯಡಿ ಕಾಮಗಾರಿಳನ್ನು ಕೈಗೆತ್ತಿಕೊಳ್ಳಲು ಅನುಸರಿಸುವ ಮಾರ್ಗಸೂಚಿಗಳೇನು; | ಗ್ರಾಮೀಣ ಸುಮಾರ್ಗ ಯೋಜನೆಯನ್ನು ಅನುಷ್ಠಾನಕ್ಕೆ ತರಲು 2020-21 ನೇ ಸಾಲಿನ ಆಯವ್ಯಯ ಘೋಷಣೆ ಸಂಖ್ಯೆ: 147 ರಲ್ಲಿ ಗ್ರಾಮೀಣ ರಸ್ತೆಗಳ ಸುಧಾರಣೆಗಾಗಿ ಹೊಸದಾಗಿ "ಗ್ರಾಮೀಣ ಸುಮಾರ್ಗ"ಯೋಜನೆಯನ್ನು ಜಾರಿಗೆ ತರಲು ಪ್ರಸ್ತಾಪಿಸಲಾಗಿದೆ.<br><br>ಗ್ರಾಮೀಣ ಸುಮಾರ್ಗ ಯೋಜನೆಯಡಿಯಲ್ಲಿ ಮುಂಬರುವ 5 ವರ್ಷಗಳಲ್ಲಿ 20000 ಕಿ.ಮೀ. ಉದ್ದದ ಗ್ರಾಮೀಣ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಿದೆ. ಗ್ರಾಮೀಣ ರಸ್ತೆಗಳ ಸುಧಾರಣೆಗಾಗಿ 2020-21 ನೇ ಸಾಲಿನಲ್ಲಿ ರೂ.780.00 ಕೋಟಿಗಳನ್ನು ಒದಗಿಸಲಾಗಿದೆ ಎಂದು ಘೋಷಿಸಲಾಗಿದೆ. ಅದರಂತೆ<br><br>ಗ್ರಾಮೀಣ ಸುಮಾರ್ಗ ಯೋಜನೆಗೆ ಸಚಿವ ಸಂಪುಟದ ಅನುಮೋದನೆ ಪಡೆಯಲು ಕರಡು ಸಚಿವ ಸಂಪುಟದ ಟಿಪ್ಪಣಿಗೆ ಈಗಾಗಲೇ ಯೋಜನಾ ಇಲಾಖೆಯ ಸಹಮತಿಯನ್ನು ಪಡೆಯಲಾಗಿದ್ದು, ಆರ್ಥಿಕ ಇಲಾಖೆಯ ಸಹಮತಿಯನ್ನು ನಿರೀಕ್ಷಿಸಲಾಗಿದೆ. ಈ ಯೋಜನೆಯ ಉದ್ದೇಶ ಹಾಗೂ ಕಾರ್ಯಚಟುವಟಿಕೆ ಗಳು ಕೆಳಗಿನಂತಿದೆ.<br><br>ರಾಜ್ಯದ ಎಲ್ಲಾ 189 ಗ್ರಾಮೀಣ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿನ ಗ್ರಾಮೀಣ ರಸ್ತೆಗಳ<br>• ಬಲಪಡಿಸುವಿಕೆ,<br>• ನವೀಕರಣ ಮತ್ತು<br>• ನಿರ್ವಹಣೆಯ ಅಗತ್ಯವಿದ್ದು, ಸಮರ್ಪಕ ನಿರ್ವಹಣೆ ಮಾಡುವ ಮೂಲಕ ರಸ್ತೆಗಳ ಮೇಲೆ ಹೂಡಿರುವ ಬಂಡವಾಳವನ್ನು ಫಲಪ್ರದವಾಗಿಸಲು ಮತ್ತು<br>• ರಸ್ತೆಗಳ ಬಾಳಿಕೆಯ ಕಾಲಾವಧಿಯನ್ನು |

| | | |
|---|---|---|
| | | ಧೀರ್ಘಗೊಳಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.<br>ರಾಜ್ಯದಲ್ಲಿ ಸುಮಾರು 58,949.00 ಕಿ.ಮೀ ಇರುವ ಪ್ರಮುಖ ಗ್ರಾಮೀಣ ರಸ್ತೆಗಳ ಪೈಕಿ<br>• ಡಾಂಬರು ಮೇಲ್ಮೈಯುಳ್ಳ ಸುಮಾರು 24,246 ಕಿ.ಮೀ ಉದ್ದದ ರಸ್ತೆಗಳನ್ನು ಗುರುತಿಸಿ, ಅವುಗಳಲ್ಲಿ ನಿರ್ವಹಣೆಯಲ್ಲಿರುವ ಸುಮಾರು 4,246 ಕಿ.ಮೀ ಉತ್ತಮ ಸ್ಥಿತಿಯಲ್ಲಿರುವ ರಸ್ತೆಗಳನ್ನು ಹೊರತುಪಡಿಸಿ<br>• ಉಳಿದ 20,000.00 ಕಿ.ಮೀ ರಸ್ತೆಗಳನ್ನು ಮುಂದಿನ 5 ವರ್ಷಗಳಲ್ಲಿ ನಿರ್ವಹಣೆ ಮತ್ತು ನವೀಕರಣವನ್ನು ಕೈಗೊಳ್ಳುವುದು ಈ ಯೋಜನೆಯ ಪ್ರಮುಖ ಕಾರ್ಯಚಟುವಟಿಕೆಯಾಗಿದೆ. |
| ಆ. | ಗ್ರಾಮೀಣ ರಸ್ತೆಗಳ ನಿರ್ವಹಣೆಗಾಗಿ ಶಾಸಕರ ಅಧ್ಯಕ್ಷತೆಯಲ್ಲಿರುವ "ಟಾಸ್ಕ್ ಪೋರ್ಸ್ ಸಮಿತಿ" ಮೂಲಕ ಆಯ್ಕೆ ಮಾಡಿದ ತುರ್ತು ಆಧ್ಯತೆ ಮೇರೆಗೆ ನಿರ್ವಹಣೆ ಮಾಡಲಾಗುವ ಕಾಮಗಾರಿಗಳ ಅನುದಾನ ಕಳೆದ ಕೆಲವು ವರ್ಷಗಳಿಂದ ಬಿಡುಗಡೆ ಯಾಗದಿರುವುದಕ್ಕೆ ಕಾರಣಗಳೇನು; | ಗ್ರಾಮೀಣ ರಸ್ತೆಗಳ ನಿರ್ವಹಣೆಗಾಗಿ ಶಾಸಕರ ಅಧ್ಯಕ್ಷತೆಯಲ್ಲಿರುವ "ಟಾಸ್ಕ್ ಫೋರ್ಸ್ ಸಮಿತಿ" ಮೂಲಕ ಆಯ್ಕೆ ಮಾಡಿದ ತುರ್ತು ಆದ್ಯತೆ ಮೇರೆಗೆ ನಿರ್ವಹಣೆ ಮಾಡಲಾಗುವ ಕಾಮಗಾರಿಗಳಿಗೆ 2020-21 ನೇ ಸಾಲಿನ ಎರಡನೇ ತ್ರೈಮಾಸಿಕದವರೆವಿಗೂ ಅನುದಾನವನ್ನು ಬಿಡುಗಡೆವನ್ನು ಮಾಡಲಾಗಿರುತ್ತದೆ. |
| ಇ. | ಟಾಸ್ಕ್‌ಫೋರ್ಸ್ ಕಾಮಗಾರಿಗಳ ಅನುದಾನ ಬಿಡುಗಡೆ ವಿಳಂಬವಾಗುತ್ತಿರುವುದರಿಂದ ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಗುತ್ತಿದೆದಾರರು ಹಿಂದೇಟು ಹಾಕುತ್ತಿರುವುದನ್ನು ತಪ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಉದ್ಭವಿಸುವುದಿಲ್ಲ. |

ಕಡತ ಸಂಖ್ಯೆ: ಗ್ರಾಅಪ:ಅಧಿ-08/20:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

<u>ಕರ್ನಾಟಕ ವಿಧಾನ ಸಭೆ</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 652 |
| ಸದಸ್ಯರ ಹೆಸರು | ಶ್ರೀ ದೇವಾನಂದ ಫುಲಸಿಂಗ್ ಚವಾಣ್ (ನಾಗಠಾಣ) |
| ಉತ್ತರಿಸಬೇಕಾದ ದಿನಾಂಕ | 09.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಪಿ.ಎಂ.ಜಿ.ಎಸ್.ವೈ ಯೋಜನೆಯಡಿ ರಾಜ್ಯಕ್ಕೆ ಅನುದಾನ ದೊರೆತ ಅಂತಿಮ ವರ್ಷ ಯಾವುದು; | • ಪಿ.ಎಂ.ಜಿ.ಎಸ್.ವೈ. ಹಂತ-2 ರ ಯೋಜನೆಗೆ ರಾಜ್ಯಕ್ಕೆ ದೊರೆತ ಅಂತಿಮ ವರ್ಷ 2018.<br>• ಪ್ರಸ್ತುತ ರಾಜ್ಯದಲ್ಲಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಹಂತ-3 ರ ಯೋಜನೆ ಚಾಲ್ತಿಯಲ್ಲಿದ್ದು ಸದರಿ ಯೋಜನೆಗೆ ರಾಜ್ಯಕ್ಕೆ 2020ರಲ್ಲಿ ಅನುದಾನ ದೊರೆತಿರುತ್ತದೆ. |
| ಆ. | ಪಿ.ಎಂ.ಜಿ.ಎಸ್.ವೈ ಮೂರನೇ ಹಂತವನ್ನು ಕೇಂದ್ರ ಸರ್ಕಾರ ಯಾವಾಗ ಘೋಷಣೆ ಮಾಡಿದೆ; ಇದರಡಿ ಸಾಧಿಸಿರುವ ಪ್ರಗತಿಯ ವಿವರಗಳೇನು; (ಸಂಕ್ಷಿಪ್ತ ಮಾಹಿತಿ ನೀಡುವುದು) | ಕೇಂದ್ರ ಸರ್ಕಾರವು ಪಿ.ಎಂ.ಜಿ.ಎಸ್.ವೈ-III ಯೋಜನೆಯನ್ನು 2019-20 ನೇ ಸಾಲಿನಲ್ಲಿ ಘೋಷಣೆಯನ್ನು ಮಾಡಿರುತ್ತದೆ.<br>• ಪಿಎಮ್‌ಜಿಎಸ್‌ವೈ-III ಯೋಜನೆಯಡಿ ಕರ್ನಾಟಕ ರಾಜ್ಯಕ್ಕೆ 5612.50 ಕಿ.ಮೀ ಉದ್ದದ ರಸ್ತೆಗಳ ಹಂಚಿಕೆ ಮಾಡಿ ಪಿ.ಎಂ.ಜಿ.ಎಸ್.ವೈ ಮಾರ್ಗಸೂಚಿಯಂತೆ CUCPL ಪಟ್ಟಿಯನ್ವಯ ಪ್ರಮುಖ ರಸ್ತೆಗಳನ್ನು ಆಯ್ಕೆ ಮಾಡಲು ಸೂಚಿಸಿದಂತೆ<br>• ಮೊದಲನೇ ಬ್ಯಾಚ್‌ನಡಿ 3620.61 ಕಿ.ಮೀ ಉದ್ದದ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಕೇಂದ್ರದ ಅಧಿಕಾರಯುಕ್ತ ಸಮಿತಿಯು (Empowered Committee) 3226.21 ಕಿ.ಮೀ. ಉದ್ದದ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಿದಂತೆ, ಅದರಂತೆ<br>• ದಿನಾಂಕ 20.04.2020 ರಂದು ಸಚಿವ ಸಂಪುಟವು ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ-III ಬ್ಯಾಚ್-1 ರ 3226.21 ಕಿ.ಮೀ.ಗಳ ಉದ್ದದ ರಸ್ತೆ ಹಾಗೂ 26 ಸೇತುವೆಗಳ ಅಭಿವೃದ್ಧಿ ಕಾಮಗಾರಿಗಳನ್ನು |

| | | |
|---|---|---|
| | | ರೂ.2169.72 ಕೋಟಿಗಳ ಮೊತ್ತದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಅನುಮೋದನೆ ನೀಡಿರುತ್ತದೆ. ಅದರನ್ವಯ<br>• ರಾಜ್ಯ ಸರ್ಕಾರವು ದಿನಾಂಕ 21.04.2020 ರಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br>• ಈ ಯೋಜನೆಯಡಿ ಕಾಮಗಾರಿಗಳನ್ನು 305 ಪ್ಯಾಕೇಜುಗಳನ್ನಾಗಿ ಮಾಡಿ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ಕರೆದು, ಈಗಾಗಲೇ 301 ಪ್ಯಾಕೇಜ್‌ಗಳಿಗೆ ಅನುಮೋದನೆಯನ್ನು ನೀಡಲಾಗಿದೆ.<br>• ಇನ್ನುಳಿದ 4 ಪ್ಯಾಕೇಜ್ ಕಾಮಗಾರಿಗಳ ಟೆಂಡರ್‌ಗಳನ್ನು ಇತ್ಯರ್ಥಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ. | ಮೂರನೇ ಹಂತದಲ್ಲಿ ರಾಜ್ಯಕ್ಕೆ ಮಂಜೂರಾದ ಅನುದಾನ ಮತ್ತು ರಸ್ತೆ (ಉದ್ದ) ಎಷ್ಟು;ಇದಕ್ಕಾಗಿ ಬಿಡುಗಡೆಯಾದ ಅನುದಾನವೆಷ್ಟು; | ಪಿ.ಎಂ.ಜಿ.ಎಸ್.ವೈ.-III ರಡಿ ರಾಜ್ಯಕ್ಕೆ ಒಟ್ಟು 5612.50 ಕಿ.ಮೀ. ಉದ್ದದ ರಸ್ತೆಗಳು ಮಂಜೂರಾಗಿದ್ದು, ಯೋಜನೆಯ ಮೊದಲನೇ ಬ್ಯಾಚ್‌ನಲ್ಲಿ 26 ಉದ್ದ ಸೇತುವೆ ಕಾಮಗಾರಿಗಳು ಒಳಗೊಂಡಂತೆ 3226.21 ಕಿ.ಮೀ. ರಸ್ತೆ ಗಳನ್ನು ಅಭಿವೃದ್ಧಿಪಡಿಸಲು ನಿಗಧಿಪಡಿಸಿರುವ ರೂ.2169.72 ಕೋಟಿಗಳ ಪೈಕಿ ಕೇಂದ್ರದ ಪಾಲು ರೂ.534.24 ಕೋಟಿಗಳು ಹಾಗೂ ರಾಜ್ಯದ ಪಾಲು ರೂ.375.32 ಕೋಟಿಗಳು ಸೇರಿ ಒಟ್ಟಾರೆ ರೂ.909.56 ಕೋಟಿಗಳನ್ನು ಬಿಡುಗಡೆ ಮಾಡಿದೆ. |
| ಈ. | ಕೇಂದ್ರ ಸರ್ಕಾರದಿಂದ ಮಂಜೂರಾದ ಅನುದಾವನ್ನು ಬಳಕೆ ಮಾಡಿಕೊಳ್ಳದಿದ್ದಲ್ಲಿ ಯೋಜನೆಯನ್ನು ರದ್ದು ಮಾಡುವ ಸಾಧ್ಯತೆಯಿದೆಯೇ? | ಕೇಂದ್ರ ಸರ್ಕಾರದ ಅನುದಾನವನ್ನು ನಿಗಧಿತ ಅವಧಿಯೊಳಗೆ ಖರ್ಚು ಮಾಡಿದ್ದಲ್ಲಿ ಮಾತ್ರ ಮುಂದಿನ ಕಂತಿನ ಅನುದಾನ ಬಿಡುಗಡೆಗೊಳಿಸ ಲಾಗುವುದೆಂದು ಷರತ್ತು ವಿಧಿಸಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-08/22:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 664

ಸದಸ್ಯರ ಹೆಸರು : ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)

ಉತ್ತರಿಸಬೇಕಾದ ದಿನಾಂಕ : 09/12/2020

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಬೀದರ್ ಜಿಲ್ಲೆಯ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರ ಪೂರ್ವ ಮತ್ತು ಮೆಟ್ರಿಕ್ ವಿದ್ಯಾರ್ಥಿ ನಿಲಯಗಳ ಮತ್ತು ಸರ್ಕಾರಿ ವಸತಿ ನಿಲಯಗಳಿಗೆ ಆಹಾರ ಪದಾರ್ಥಗಳು ಮತ್ತು ಇತರೆ ಸಾಮಗ್ರಿಗಳನ್ನು ಒದಗಿಸುವ ಪ್ರಕ್ರಿಯೆಗೆ 2019-20 ರಲ್ಲಿ ಟೆಂಡರ್ ಕರೆದು, 2020-21 ನೇ ಸಾಲಿಗೆ ಟೆಂಡರ್ ಅಂತಿಮಗೊಳಿಸಿ, ಟೆಂಡರ್ ನಿಯಮಗಳನ್ನು ಉಲ್ಲಂಘನೆ ಮಾಡಿ ಸರ್ಕಾರದ ಬೊಕ್ಕಸಕ್ಕೆ ಕೋಟ್ಯಾಂತರ ರೂಪಾಯಿ ನಷ್ಟ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ: | 1. 2019-20ನೇ ಸಾಲಿನಲ್ಲಿ ಆಹಾರ ಧಾನ್ಯ ಸರಬರಾಜು ಟೆಂಡರ್ ಕೆ.ಟಿ.ಪಿ.ಪಿ ನಿಯಮಾವಳಿಗಳನ್ವಯ ದಿ: 25-06-2019 ರಂದು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಕರೆಯಲಾಗಿತ್ತು. ಆದರೆ ಟೆಂಡರ್‌ನಲ್ಲಿ ಕೆಲವು ನ್ಯೂನ್ಯತೆಗಳಿರುವುದರಿಂದ ದಿ:15-10-2019 ರಂದು ಮಾನ್ಯ ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ ರವರ ಅಧ್ಯಕ್ಷತೆಯಲ್ಲಿ ನಡೆದ ಟೆಂಡರ್ ಸಮಿತಿಯ ಸಭೆಯಲ್ಲಿ ಸದರಿ ಟೆಂಡರ್‌ನ್ನು ರದ್ದು ಪಡಿಸಿ, ಅಲ್ಪಾವಧಿ ಟೆಂಡರ್ ಕರೆಯಲು ತೀರ್ಮಾನಿಸಲಾಯಿತು.<br>2. ನಂತರ ಜಿಲ್ಲಾ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಹಾಗೂ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗಳು ಜೊತೆಯಾಗಿ **ದಿ:25-11-2019ರಂದು** ಪುನಃ ಕೆ.ಟಿ.ಪಿ.ಪಿ ನಿಯಮಾವಳಿಗಳನ್ವಯ ಆಹಾರ ಧಾನ್ಯ ಸರಬರಾಜಿಗಾಗಿ ಪುನಃ ಟೆಂಡರ್ ಪ್ರಕ್ರಿಯೆ ಪ್ರಾರಂಭಿಸಿತು. ಟೆಂಡರ್‌ನ್ನು L4 ಬಿಡ್‌ದಾರರಿಗೆ ಅಂತಿಮಗೊಳಿಸಲಾಗಿತ್ತು. ಆದರೆ L4-ಬಿಡ್‌ದಾರರ ವಿರುದ್ಧ ಇಲಾಖಾ ವಿಚಾರಣೆ ನಡೆದು ಟೆಂಡರ್ ರದ್ದುಪಡಿಸಿ ಪುನಃ ಟೆಂಡರ್ ಕರೆಯಲು ಸರ್ಕಾರವು ಆದೇಶಿಸಿರುತ್ತದೆ.<br>3. ಟೆಂಡರ್ ಪ್ರಕ್ರಿಯೆ ಪೂರ್ಣಗೊಳ್ಳದೆ ಇರುವುದರಿಂದ ಸರ್ಕಾರದ ಅನುದಾನಕ್ಕೆ ನಷ್ಟವಾಗಿರುವುದಿಲ್ಲ. |

| | | |
|---|---|---|
| | | 4. ಕೆ.ಟಿ.ಪಿ.ಪಿ ನಿಯಮಗಳನ್ವಯ ಟೆಂಡರ್ ಕರೆದಿರುವುದರಿಂದ ಟೆಂಡರ್ ಪ್ರಕ್ರಿಯೆಯು ನಿಯಮಗಳ ಉಲ್ಲಂಘನೆಯಾಗಿರುವುದಿಲ್ಲ.<br><br>5. ಸರ್ಕಾರವು ಟೆಂಡರ್ ರದ್ದುಪಡಿಸಿರುವ ಕ್ರಮವನ್ನು ಪ್ರಶ್ನಿಸಿ L4-ಬಿಡ್‌ದಾರರು ಉಚ್ಚ ನ್ಯಾಯಾಲಯ ಕಲಬುರಗಿಯಲ್ಲಿ ದಾವೆ ಹೂಡಿರುತ್ತಾರೆ. ಹಾಗಾಗಿ ಇಲ್ಲಿಯವರೆಗೆ ಆಹಾರ ಧಾನ್ಯಗಳ ಸರಬರಾಜಿಗಾಗಿ ಟೆಂಡರ್ ಅಂತಿಮವಾಗಿರುವುದಿಲ್ಲ. |
| ಆ | ಬಂದಿದ್ದಲ್ಲಿ ಈ ಟೆಂಡರ್ ಅವ್ಯವಹಾರದಲ್ಲಿ ಬೀದರ್ ಜಿಲ್ಲೆಯ ನಿಕಟ ಪೂರ್ವ ಜಿಲ್ಲಾಧಿಕಾರಿ ಮತ್ತು ಇತರೆ ಅಧಿಕಾರಿಗಳು ಶಾಮೀಲಾಗಿದ್ದು, ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸರ್ಕಾರ ಅವರ ವಿರುದ್ಧ ಯಾವ ರೀತಿಯ ಕ್ರಮ ಕೈಗೊಳ್ಳಲಿದೆ? | ಇಲ್ಲಿಯವರೆಗೆ ಟೆಂಡರ್ ಪ್ರಕ್ರಿಯೆ ಅಂತಿಮಗೊಳ್ಳದೆ ಇರುವುದರಿಂದ ಸರ್ಕಾರದ ಬೊಕ್ಕಸಕ್ಕೆ ಯಾವುದೇ ನಷ್ಟವಾಗಿರುವುದಿಲ್ಲ. |
| ಇ | ಈ ಟೆಂಡರ್ ನಲ್ಲಿ ಅಕ್ರಮವಾಗಿ L4ಗೆ ಟೆಂಡರ್ ವಹಿಸಿದ್ದನ್ನು ರದ್ದು ಮಾಡಿ ನಿಯಮಾನುಸಾರ ಅರ್ಹರಾದವರಿಗೆ ಟೆಂಡರ್ ವಹಿಸಲಿಕ್ಕೆ ಸರ್ಕಾರ ಕ್ರಮ ಕೈಗೊಳ್ಳುವುದೇ? | L4-ಬಿಡ್‌ದಾರರ ವಿರುದ್ಧ ಇಲಾಖಾ ವಿಚಾರಣೆಯಾಗಿ ದಿ:20-10-2020ರಂದು ಟೆಂಡರ್ ರದ್ದು ಪಡಿಸಿ ಪುನಃ ಅಲ್ಪಾವಧಿ ಟೆಂಡರ್ ಕರೆಯಲು ಸರ್ಕಾರವು ಆದೇಶಿಸಿದ್ದು, ಸದರಿ ಆದೇಶದ ವಿರುದ್ಧ L4-ಬಿಡ್‌ದಾರರು ಉಚ್ಚ ನ್ಯಾಯಾಲಯ ಕಲಬುರಗಿಯಲ್ಲಿ ದಾವೆ ಹೂಡಿರುತ್ತಾರೆ. ಹಾಗಾಗಿ ಇಲ್ಲಿಯವರೆಗೆ ಆಹಾರ ಧಾನ್ಯಗಳ ಸರಬರಾಜಿಗಾಗಿ ಯಾವುದೇ ಟೆಂಡರ್ ಪ್ರಕ್ರಿಯೆ ಅಂತಿಮವಾಗಿರುವುದಿಲ್ಲ. |

ಸಂಖ್ಯೆ: MWD 164 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ, ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 679

ಸದಸ್ಯರ ಹೆಸರು : ಶ್ರೀ ರಘುಪತಿ ಭಟ್.ಕೆ. (ಉಡುಪಿ)

ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು,

ಉತ್ತರಿಸಬೇಕಾದ ದಿನಾಂಕ : 09.12.2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಹೆಣ್ಣು ಮಗುವಿಗೆ ನೀಡುತ್ತಿರುವ ಭಾಗ್ಯಲಕ್ಷ್ಮಿ ಯೋಜನೆಯ ಬಾಂಡ್ ಕ್ಲಿಪ್ತ ಸಮಯದಲ್ಲಿ ವಿತರಣೆಯಾಗದಿರುವುದನ್ನು ಗಂಭೀರವಾಗಿ ಪರಿಗಣಿಸಲಾಗಿದೆಯೇ: | ಭಾಗ್ಯಲಕ್ಷ್ಮಿ ಯೋಜನೆಯನ್ನು ಪಾಲುದಾರ ಹಣಕಾಸು ಸಂಸ್ಥೆಯಾದ ಭಾರತೀಯ ಜೀವ ವಿಮಾ ನಿಗಮದ ಮೂಲಕ ಅನುಷ್ಠಾನಗೊಳಿಸಲಾಗಿದ್ದು, ಪ್ರಸ್ತುತ RBI ಬಡ್ಡಿದರ ಏರಿಳಿತದಿಂದಾಗಿ ಸದರಿಯವರು ಬಾಂಡಿನ ಮೇಲೆ ಮುದ್ರಿಸಿರುವಂತೆ ರೂ.1.00 ಲಕ್ಷ ಪರಿಪಕ್ವ ಮೊತ್ತವನ್ನು ನೀಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಹೆಚ್ಚುವರಿ ಅನುದಾನ ಬೇಡಿಕೆ ಸಲ್ಲಿಸಿರುತ್ತಾರೆ. ಈ ಎಲ್ಲಾ ಆಡಳಿತಾತ್ಮಕ ಕಾರಣದಿಂದಾಗಿ ಬಾಂಡ್ ವಿತರಣೆಯಲ್ಲಿ ವ್ಯತ್ಯಾಸವಾಗಿದ್ದು, ಪ್ರಸ್ತುತ ಬಾಂಡುಗಳು ಮುದ್ರಣಗೊಂಡು ವಿತರಣೆಯಾಗುತ್ತಿದೆ. |
| ಆ | ಕಳೆದ 2018ನೇ ಸಾಲಿನಿಂದ ಈವರೆಗೆ ಎಷ್ಟು ಮಂದಿಗೆ ಭಾಗ್ಯಲಕ್ಷ್ಮಿ ಯೋಜನೆಯ ಬಾಂಡ್ ಮಂಜೂರಾಗಿದೆ (ತಾಲ್ಲೂಕುವಾರು ಸಂಪೂರ್ಣ ವಿವರಗಳನ್ನು ಒದಗಿಸುವುದು) | ಕಳೆದ 2018-19 ಮತ್ತು 2019-20ನೇ ಸಾಲಿನಲ್ಲಿ 3,01,422 ಫಲಾನುಭವಿಗಳಿಗೆ ಭಾಗ್ಯಲಕ್ಷ್ಮಿ ಯೋಜನೆಯಡಿ ಬಾಂಡ್ ಮಂಜೂರಾಗಿದೆ. (ಮಾಹಿತಿಯನ್ನು ಅನುಬಂಧ 1 ರಲ್ಲಿ ಒದಗಿಸಿದೆ.) |
| ಇ | ಮಂಜೂರಾದ ಭಾಗ್ಯಲಕ್ಷ್ಮಿ ಬಾಂಡ್‌ಗಳಲ್ಲಿ ಎಷ್ಟು ಬಾಂಡ್ ವಿತರಣೆಯಾಗಿದೆ; ವಿತರಿಸಲು ಎಷ್ಟು ಬಾಕಿಯಿದೆ; ಬಾಕಿಯಿರಿಸಲು ಕಾರಣಗಳೇನು (ಜಿಲ್ಲಾವಾರು ಸಂಪೂರ್ಣ ವಿವರಗಳನ್ನು ಒದಗಿಸುವುದು): | ಮಂಜೂರಾದ ಭಾಗ್ಯಲಕ್ಷ್ಮಿ ಬಾಂಡ್‌ಗಳಲ್ಲಿ 3,01,422 ಬಾಂಡುಗಳನ್ನು ವಿತರಿಸಲಾಗಿದೆ. 2019-20ನೇ ಸಾಲಿನ ಕೆಲವು ಬಾಂಡುಗಳು ಮುದ್ರಣಗೊಂಡು ರವಾನೆಯಾಗಿದ್ದು, ಜಿಲ್ಲೆಗಳನ್ನು ತಲುಪುವ ಹಂತದಲ್ಲಿರುತ್ತದೆ. (ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2 ರಲ್ಲಿ ಒದಗಿಸಿದೆ.) |

| | | |
|---|---|---|
| ಈ | ಸದರಿ ಭಾಗ್ಯಲಕ್ಷ್ಮಿ ಬಾಂಡ್‌ಗಳನ್ನು ಪಾರದರ್ಶಕವಾಗಿ ಕ್ಲಿಪ್ತ ಸಮಯದಲ್ಲಿ ವಿತರಿಸಲು ಏನು ಕ್ರಮ ಕೈಗೊಳ್ಳಲಾಗುವುದು? | 2020-21ನೇ ಸಾಲಿನಿಂದ ಭಾಗ್ಯಲಕ್ಷ್ಮಿ ಯೋಜನೆಯನ್ನು ಅಂಚೆ ಇಲಾಖೆಯ ಸುಕನ್ಯಾ ಸಮೃದ್ಧಿ ಖಾತೆ ಯೋಜನೆಯ ಮುಖಾಂತರ ಅನುಷ್ಠಾನಗೊಳಿಸಲಾಗುತ್ತಿದ್ದು, ಅನುದಾನ ಬಿಡಗಡೆಯಾದ ಕೂಡಲೇ ನೋಂದಣಿಯಾಗಿರುವ ಅರ್ಹ ಫಲಾನುಭವಿಗಳ ಹೆಸರಿನಲ್ಲಿ ಹಣ ಠೇವಣಿ ಹೂಡಿ ಪಾಸ್ ಬುಕ್ಕನ್ನು ವಿತರಿಸುವುದರಿಂದ ವಿಳಂಬವಾಗುವ ಪ್ರಶ್ನೆ ಇನ್ನು ಮುಂದೆ ಉದ್ಭವವಾಗುವುದಿಲ್ಲ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 124 ಮಮಅ 2020

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರ ಹೆಸರು | : ಡಾ:ಯತೀಂದ್ರ ಸಿದ್ದರಾಮಯ್ಯ (ವರುಣ) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : 686 |
| ಉತ್ತರಿಸಬೇಕಾದ ದಿನಾಂಕ | : 09.12.2020. |
| ಉತ್ತರಿಸಬೇಕಾದ ಸಚಿವರು | : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು. |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ವಿವಿಧ ಕಾರಣಗಳಿಗೆ ಅಕಾಲಿಕವಾಗಿ ಮರಣ ಹೊಂದಿದ ಜಾನುವಾರುಗಳ ಮಾಲೀಕರಿಗೆ ಸರ್ಕಾರದಿಂದ ಪರಿಹಾರವನ್ನು ನೀಡಲಾಗುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; ಹಾಗಿದ್ದಲ್ಲಿ, ಪರಿಹಾರ ನೀಡುವುದನ್ನು ನಿಲ್ಲಿಸಲಾಗಿರುವುದು ನಿಜವೇ; ಇದರಿಂದ ಬಡ ವರ್ಗದವರ ಜೀವನೋಪಾಯಕ್ಕೆ ಆಸರೆಯಾಗಿದ್ದ ಜಾನುವಾರುಗಳನ್ನು ಕಳೆದುಕೊಂಡವರಿಗೆ ಯಾವುದೇ ಪರಿಹಾರ ಸಿಗದ ಕಾರಣ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | 1. ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 81 ಪಪಾಯೋ 2017, ದಿನಾಂಕ: 05.08.2017 ರಂತೆ, ಮತ್ತು ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ: ಪಸಂಮೀ 81 ಪಪಾಯೋ 2017 ದಿನಾಂಕ: 28.10.2017 ರಂತೆ, ವಿಮೆಗೆ ಒಳಪಡದ ಎತ್ತು/ ಹಸು/ ಹೋರಿ/ ಕೋಣ/ ಎಮ್ಮೆ/ ಕಡಸು/ ಮಣಕಗಳು (ಆರು ತಿಂಗಳು ಮೇಲ್ಪಟ್ಟು), ಆಕಸ್ಮಿಕವಾಗಿ ಮೃತಪಟ್ಟ ಸಂದರ್ಭದಲ್ಲಿ ಮಾರುಕಟ್ಟೆ ಮೌಲ್ಯದನುಸಾರ ಗರಿಷ್ಟ ರೂ.10,000/- ಮಿತಿಯೊಳಗೆ ಪರಿಹಾರಧನವನ್ನು ನೀಡುವ ಆವಕಾಶವನ್ನು ಕಲ್ಪಿಸಲಾಗಿದ್ದು, 2017-18ನೇ ಸಾಲಿನಿಂದ 2019-2020ನೇ ಸಾಲಿನ ವರೆವಿಗೂ ವಿಮೆ ಇಲ್ಲದ ರಾಸುಗಳಿಗೆ ಮರಣ ಪರಿಹಾರ ನೀಡಲಾಗಿದೆ. 2019-20ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವರ್ಗದವರಿಗೆ ಮಾತ್ರ ಪರಿಹಾರವನ್ನು ನೀಡಲಾಗಿದೆ. |

| | | |
|---|---|---|
| | | 2020-21 ನೇ ಸಾಲಿನಲ್ಲಿಯೂ ಆಕಸ್ಮಿಕ ಮರಣ ಪರಿಹಾರ ಕಾರ್ಯಕ್ರಮಕ್ಕೆ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವರ್ಗದವರಿಗೆ ವಿತರಣೆಗಾಗಿ ರೂ.676.74 ಲಕ್ಷ ನಿಗದಿಯಾಗಿರುತ್ತದೆ.<br>ವಂಟನ ಬಿಡುಗಡೆ ಮತ್ತು ಲಭ್ಯತೆಗನುಸಾರವಾಗಿ ಸಲ್ಲಿಸಲಾಗುವ ಪ್ರಸ್ತಾವನೆಗಳ ಜ್ಯೇಷ್ಠತೆ ಆಧಾರದ ಮೇರೆಗೆ ಪರಿಹಾರ ಧನವನ್ನು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಬಿಡುಗಡೆಗೊಳಿಸಲಾಗುತ್ತಿದೆ.<br>2. ಅಕಾಲಿಕ ಮರಣ ಹೊಂದಿದ ಕುರಿ ಮೇಕೆಗಳಿಗೆ ನೀಡುತ್ತಿದ್ದ ಮರಣ ಪರಿಹಾರ ಧನ ಯೋಜನೆಗೆ 2020-21ನೇ ಸಾಲಿನಲ್ಲಿ ಅನುದಾನ ಒದಗಿಸಿರುವುದಿಲ್ಲ. |
| ಆ | ಬಂದಿದ್ದಲ್ಲಿ, ಯಾವ ಕ್ರಮ ತೆಗೆದುಕೊಂಡಿಗೆ (ಮಾಹಿತಿ ನೀಡುವುದು)? | 2017-18, 2018-19ನೇ ಸಾಲಿನಲ್ಲಿ ವಿಮೆ ಇಲ್ಲದ ರಾಸುಗಳಿಗೆ ಮರಣ ಪರಿಹಾರ ನೀಡಲಾಗಿದೆ. ಮುಂದುವರೆದು, 2019-20 ಮತ್ತು 2020-21ನೇ ಸಾಲಿಗೆ ಅನುದಾನ ಲಭ್ಯತೆಯನ್ನು ಆಧರಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಮಾತ್ರ ಮರಣ ಪರಿಹಾರ ವಿತರಿಸಲಾಗಿದೆ. |

**ಪಸಂಮೀ ಇ-302 ಸಲೆವಿ 2020**

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 692

ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 09/12/2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಅಂಗನವಾಡಿಗಳಿಗೆ ಆಹಾರ ಧಾನ್ಯ ಸರಬರಾಜು ಮಾಡಲು ಗುತ್ತಿಗೆ ನೀಡುವಾಗ ಅನುಸರಿಸಬೇಕಾದ ಕ್ರಮಗಳೇನು; | ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಂತೆ ರಾಜ್ಯದಲ್ಲಿ ಸ್ಥಾಪಿಸಲಾಗಿರುವ 137 ಎಂ.ಎಸ್.ಪಿ.ಟಿ.ಸಿ. ಗಳು ಅಂಗನವಾಡಿ ಕೇಂದ್ರಗಳ ಫಲಾನುಭವಿಗಳಿಗೆ ಅಗತ್ಯ ಪೂರಕ ಪೌಷ್ಠಿಕ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುತ್ತಿದ್ದು, ಇಲಾಖೆಯು ಆಹಾರ ಸಾಮಗ್ರಿಗಳ ಖರೀದಿಗೆ ಯಾವುದೇ ಗುತ್ತಿಗೆಯನ್ನು ನೀಡಿರುವುದಿಲ್ಲ. |
| ಆ. | ಬಾಗೇಪಲ್ಲಿ ಕ್ಷೇತ್ರದ ಅಂಗನವಾಡಿಗಳಿಗೆ ಆಹಾರ ಧಾನ್ಯ ಸರಬರಾಜು ಮಾಡಲು ಯಾವ ಸಂಸ್ಥೆಗೆ ಯಾವ ದಿನಾಂಕದಂದು ಗುತ್ತಿಗೆ ನೀಡಲಾಗಿದೆ; | ಬಾಗೇಪಲ್ಲಿ ತಾಲ್ಲೂಕು ಎಂ.ಎಸ್.ಪಿ.ಟಿ.ಸಿ. ಯು ಬಾಗೇಪಲ್ಲಿ ಕ್ಷೇತ್ರದ ಅಂಗನವಾಡಿ ಕೇಂದ್ರಗಳಿಗೆ ಅಗತ್ಯ ಆಹಾರ ಧಾನ್ಯಗಳನ್ನು ಸರಬರಾಜು ಮಾಡುತ್ತಿದೆ. |
| ಇ. | ಈ ಗುತ್ತಿಗೆಯನ್ನು ಇ–ಪ್ರಕ್ಯೂರ್‌ಮೆಂಟ್ ಮುಖಾಂತರ ನೀಡಲಾಗಿದೆಯೇ ಅಥವಾ ನೇರವಾಗಿ ನೀಡಲಾಗಿದೆಯೇ; ಟೆಂಡರ್ ಕರೆಯದೇ ನೇರವಾಗಿ ನೀಡಲು ಅವಕಾಶವಿದೆಯೇ; | ಅಂಗನವಾಡಿ ಕೇಂದ್ರಗಳ ಫಲಾನುಭವಿಗಳಿಗೆ ಸರಬರಾಜು ಮಾಡುವ ಆಹಾರ ಪದಾರ್ಥಗಳನ್ನು ಇಲಾಖೆಯು ಸ್ಥಾಪಿಸಲಾಗಿರುವ ಎಂ.ಎಸ್.ಪಿ.ಟಿ.ಸಿ. ಗಳ ಮೂಲಕ ಖರೀದಿಸುತ್ತದೆ. |

| | | |
|---|---|---|
| ಈ. | ಆಹಾರ ಸಾಮಗ್ರಿಗಳಿಗೆ ಎಷ್ಟೆಷ್ಟು ಬೆಲೆ ನಿಗದಿ ಮಾಡಲಾಗಿದೆ ? (ವಿವರ ನೀಡುವುದು) | ಚಿಕ್ಕಬಳ್ಳಾಪುರ ಜಿಲ್ಲಾ ಮೇಲ್ವಿಚಾರಣಾ ಸಮಿತಿಯಲ್ಲಿ ಅಂಗನವಾಡಿ ಕೇಂದ್ರಗಳ ಫಲಾನುಭವಿಗಳಿಗೆ ವಿತರಿಸಲಾಗುವ ಆಹಾರ ಪದಾರ್ಥಗಳಿಗೆ ನಿಗದಿಪಡಿಸಿರುವ ದರಗಳ ವಿವರ ಈ ಕೆಳಗಿನಂತಿದೆ. |

| ಕ್ರ ಸಂ. | ಆಹಾರ ಪದಾರ್ಥಗಳ ಹೆಸರು | ದರ ಪ್ರತಿ ಕೆ.ಜಿ.ಗೆ (ರೂ.ಗಳಲ್ಲಿ) |
|---|---|---|
| 1 | ಅಕ್ಕಿ | 4.00 |
| 2 | ಗೋಧಿ | 3.00 |
| 3 | ಹೆಸರುಕಾಳು | 144.00 |
| 4 | ಉಪ್ಪು | 17.00 |
| 5 | ಬೆಲ್ಲ | 66.00 |
| 6 | ತೊಗರಿಬೇಳೆ | 130.00 |
| 7 | ಕಡ್ಲೆಕಾಳು | 74.00 |
| 8 | ಶೇಂಗಾಬೀಜ | 131.42 |
| 9 | ಸಕ್ಕರೆ | 43.80 |
| 10 | ಬಹುಧಾನ್ಯ ಮಿಶ್ರಿತ ಪುಡಿ | 45.10 |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 223 ಐಸಿಡಿ 2020



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 695

ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)

ಉತ್ತರಿಸಬೇಕಾದ ದಿನಾಂಕ : 09-12-2020

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಬಾಗೇಪಲ್ಲಿ ಪಟ್ಟಣದ ಜಾಮೀಯ ಮಸೀದಿ ವತಿಯಿಂದ ನಿರ್ಮಾಣ ಮಾಡಿರುವ ಶಾದಿಮಹಲ್‌ಗೆ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; | ಬಾಗೇಪಲ್ಲಿ ಪಟ್ಟಣದ ಜಾಮಿಯಾ ಮಸೀದಿ ಸಮಿತಿಯ ಶಾದಿಮಹಲ್ ನಿರ್ಮಾಣಕ್ಕೆ ಈ ಕೆಳಕಂಡ ಆದೇಶಗಳಲ್ಲಿ ಅನುದಾನ ಬಿಡುಗಡೆ ಮಾಡಲಾಗಿದೆ. |

| ಕ್ರ.ಸಂ. | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಮಂಜೂರಾದ ಅನುದಾನ. (ರೂ.ಲಕ್ಷಗಳಲ್ಲಿ) | ಬಿಡುಗಡೆಯಾದ ಅನುದಾನ. (ರೂ.ಲಕ್ಷಗಳಲ್ಲಿ) |
|---|---|---|---|
| 1 | ಸರ್ಕಾರದ ಆದೇಶ ಸಂಖ್ಯೆ: MWD 114 MDS 2016 ದಿನಾಂಕ:14.03.2016 | 50.00 | 25.00 |
| 2 | ಸರ್ಕಾರದ ಆದೇಶ ಸಂಖ್ಯೆ: MWD 70 MDS 2017 ದಿನಾಂಕ:27.02.2017 | | 25.00 |
| 3 | ಸರ್ಕಾರದ ಆದೇಶ ಸಂಖ್ಯೆ: MWD 108 MDS 2019 ದಿನಾಂಕ:18.02.2019 | 50.00 | 50.00 |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಆ. | ಅನುಷ್ಠಾನ ಏಜೆನ್ಸಿಗೆ ಎಷ್ಟು ಅನುದಾನ ಪಾವತಿ ಮಾಡಲಾಗಿದೆ; | ಸದರಿ ಯೋಜನೆಯಡಿ ಬಿಡುಗಡೆಯಾಗುವ ಅನುದಾನವನ್ನು ಜಿಲ್ಲೆಯಿಂದ ನೇರವಾಗಿ ಸಂಸ್ಥೆಗೆ ಬಿಡುಗಡೆ ಮಾಡಿರುವುದರಿಂದ ಗುತ್ತಿಗೆದಾರರಿಗೆ ಹಣ ಪಾವತಿ ಮಾಡದೇ ಇರುವ ಬಗ್ಗೆ ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ | ಕಾಮಗಾರಿ ಪೂರ್ಣಗೊಂಡ 3 ವರ್ಷಗಳು ಕಳೆದರೂ ಬಾಕಿ ಹಣ ಪಾವತಿ ಮಾಡಲು ವಿಳಂಬ ಮಾಡುತ್ತಿರಲು ಕಾರಣಗಳೇನು; | ಸದರಿ ಶಾದಿಮಹಲ್ ಕಟ್ಟಡ ನಿರ್ಮಾಣಕ್ಕಾಗಿ ರೂ.100.00ಲಕ್ಷಗಳನ್ನು ನಿರ್ದೇಶನಾಲಯದಿಂದ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲಾಗಿದ್ದು, ಜಿಲ್ಲೆಯಿಂದ ಸಂಸ್ಥೆಗೆ ರೂ.50.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.<br><br>ಸರ್ಕಾರದಿಂದ ಮಂಜೂರಾದ ಹೆಚ್ಚುವರಿ ಅನುದಾನ ರೂ.50.00ಲಕ್ಷಗಳನ್ನು ಸಾರ್ವತ್ರಿಕ ಲೋಕಸಭಾ ಚುನಾವಣೆಯ ನೀತಿ ಸಂಹಿತೆ ಜಾರಿಯಲ್ಲಿದ್ದರಿಂದ, ಜಿಲ್ಲೆಯಿಂದ ಸಂಸ್ಥೆಗೆ ಅನುದಾನ ಬಿಡುಗಡೆ ಮಾಡಿರುವುದಿಲ್ಲ.<br><br>ಸದರಿ ರೂ.50.00ಲಕ್ಷಗಳನ್ನು ಬಿಡುಗಡೆ ಮಾಡಲು ದಿನಾಂಕ:28.01.2020 ರಂದು ಜಿಲ್ಲೆಯಿಂದ ನಿರ್ದೇಶನಾಲಯಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದರೆ, ಸದರಿ ಯೋಜನೆಯಡಿ 2019-20 ನೇ ಸಾಲಿನಲ್ಲಿ ಅನುದಾನ ಪೂರ್ಣವಾಗಿ ವೆಚ್ಚ ಮಾಡಿರುವುದರಿಂದ ಅನುದಾನ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. |

| | | |
|---|---|---|
| ಈ | ಬಾಕಿ ಹಣವನ್ನು ಯಾವಾಗ ಪಾವತಿ ಮಾಡಲಾಗುವುದು? (ವಿವರ ನೀಡುವುದು) | 2020-21ನೇ ಸಾಲಿನ ಆಯವ್ಯಯದಲ್ಲಿ ಸದರಿ ಕಾರ್ಯಕ್ರಮಕ್ಕೆ ಅನುದಾನ ಒದಗಿಸಿರುವುದಿಲ್ಲ. ಆದರೆ, ರಾಜ್ಯದಲ್ಲಿ ಅಪೂರ್ಣಗೊಂಡಿರುವ ಅಲ್ಪಸಂಖ್ಯಾತರ ಸಮುದಾಯ ಭವನದ ಕಟ್ಟಡ ಕಾಮಗಾರಿಗಳನ್ನು ಪೂರ್ಣಗೊಳಿಸಲು ಅಂದಾಜು ರೂ.58.64 ಕೋಟಿ ಅನುದಾನವನ್ನು ಮಂಜೂರು ಮಾಡುವ ಕುರಿತು ಪ್ರಸ್ತಾವನೆಯು ಸರ್ಕಾರದ ಪರಿಶೀಲನೆ ಹಂತದಲ್ಲಿದೆ. |

ಸಂಖ್ಯೆ: **MWD 165 LMQ 2020**

**(ಶ್ರೀಮಂತ ಬಾಳಾಸಾಹೇಬ ಪಾಟೀಲ್)**
ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 709
ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಹ್ಯಾರಿಸ್. ಎನ್.ಎ. (ಶಾಂತಿ ನಗರ)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.
ಉತ್ತರಿಸಬೇಕಾದ ದಿನಾಂಕ : 09-12-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಮಕ್ಕಳ ಸಮಗ್ರ ಪೋಷಣೆ ಕುರಿತು ರಾಜ್ಯ ಮತ್ತು ಕೇಂದ್ರ ಸರಕಾರಗಳ ಯೋಜನೆಗಳ ಮೂಲಕ ಕಳೆದ ಎರಡು ವರ್ಷಗಳಲ್ಲಿ ಅನುಷ್ಠಾನಗೊಳಿಸಿದ ಯೋಜನೆಗಳು ಮತ್ತು ಆ ಮೂಲಕ ಸೌಲಭ್ಯ ಪಡೆದ ಒಟ್ಟು ಮಕ್ಕಳ ಸಂಖ್ಯೆ ಎಷ್ಟು; | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಡಿ ರಾಜ್ಯ ಮತ್ತು ಕೇಂದ್ರ ಸರ್ಕಾರದ ವತಿಯಿಂದ ಕಳೆದ ಎರಡು ವರ್ಷಗಳಲ್ಲಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ:- |

| ಕ್ರ. ಸಂ. | ಯೋಜನೆ ಹೆಸರು | 2018-19ನೇ ಸಾಲಿನಲ್ಲಿ ಸೌಲಭ್ಯ ಪಡೆದ ಮಕ್ಕಳ ಸಂಖ್ಯೆ | 2019-20ನೇ ಸಾಲಿನಲ್ಲಿ ಸೌಲಭ್ಯ ಪಡೆದ ಮಕ್ಕಳ ಸಂಖ್ಯೆ |
|---|---|---|---|
| 1 | ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮ | 39,63,517 | 38,64,489 |
| 2 | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆ | 10188 | 9506 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಕೇಂದ್ರ ಪುರಸ್ಕೃತ ಯೋಜನಾ ಅನುಷ್ಠಾನಕ್ಕಾಗಿ ಎರಡು ವರ್ಷಗಳಲ್ಲಿ ಮಂಜೂರು ಮಾಡಿದ ಅನುದಾನ ಹಾಗೂ ರಾಜ್ಯ ಅನುದಾನವು ಸೇರಿದಂತೆ ಮಕ್ಕಳ ಪೋಷಣೆಗಾಗಿ ಬಳಸಿಕೊಂಡು ಅನುದಾನ ಮತ್ತು ಯೋಜನಾ ಪ್ರಗತಿ ಕುರಿತು ವಿವರಗಳೇನು; | (ರೂ. ಲಕ್ಷಗಳಲ್ಲಿ) |

| ಕ್ರ ಸಂ. | ಯೋಜನೆ ಹೆಸರು | 2018-19 | | 2019-20 | |
|---|---|---|---|---|---|
| | | ಮಂಜೂರಾದ ಅನುದಾನ | ವೆಚ್ಚ | ಮಂಜೂರಾದ ಅನುದಾನ | ವೆಚ್ಚ |
| 1 | ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮ | 215042.00 | 156487.68 | 215042.00 | 147736.28 |
| 2 | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆ | 200.00 | 166.94 | 200.00 | 163.20 |

ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮದಡಿ – ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾಗುವ 0-6 ಮಕ್ಕಳು, ಗರ್ಭಿಣಿ, ಬಾಣಂತಿಯರು & ಕಿಶೋರಿಯರಿಗೆ ಸಂಬಂಧಿಸಿದಂತೆ ವೆಚ್ಚವನ್ನು ಭರಿಸಲಾಗುತ್ತಿದ್ದು, ಮಕ್ಕಳ ಪೋಷಣೆಗಾಗಿ ಪ್ರತ್ಯೇಕ ಅನುದಾನ ಮೀಸಲಿಡಲಾಗುವುದಿಲ್ಲ.

| | | |
|---|---|---|
| ಇ) | ವಿಶೇಷ ಚೇತನ ಮಕ್ಕಳ ವೈದ್ಯಕೀಯ ಸೇವೆಯಲ್ಲಿನ ಪ್ರಗತಿ ಮತ್ತು ಅನಾರೋಗ್ಯ ಪೀಡಿತ ಮಕ್ಕಳ ಪೋಷಣೆಗಾಗಿ ಸರಕಾರದ ಪರಿಣಾಮಕಾರಿ ಕ್ರಮಗಳ ಕುರಿತಾದ ವಿವರಗಳೇನು? | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯವತಿಯಿಂದ ವಿಶೇಷ ಚೇತನ ಮಕ್ಕಳ ವೈದ್ಯಕೀಯ ಸೇವೆಗೆ ಯಾವುದೇ ಪ್ರತ್ಯೇಕ ಯೋಜನೆಗಳು ಇರುವುದಿಲ್ಲ. ಉಳಿದಂತೆ ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾಗುವ ಮಕ್ಕಳಲ್ಲಿ ಅಪೌಷ್ಠಿಕತೆಯಿಂದ ಬಳಲುತ್ತಿರುವ ಮಕ್ಕಳಿಗೆ ವೈದ್ಯರ ಸಲಹೆಯ ಆಧಾರದ ಮೇರೆಗೆ ರೂ. 2000/-ಗಳನ್ನು ಔಷಧೋಪಚಾರ ವೆಚ್ಚಕ್ಕಾಗಿ ನೀಡಲಾಗುತ್ತಿದೆ.<br><br>ಎಂಡೋಸಲ್ಫಾನ್ ಪೀಡಿತ ಜಿಲ್ಲೆಗಳಲ್ಲಿರುವ ಸಂತ್ರಸ್ಥರಿಗೆ ಇಲಾಖೆಯು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿರುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳ ಮೂಲಕ ಗುರುತಿಸಿ ಅವರಿಗೆ ಬೇಕಾದ ವೈದ್ಯಕೀಯ ಚಿಕಿತ್ಸೆ, ದೈಹಿಕ ಚಿಕಿತ್ಸೆ ಹಾಗೂ ಸಾಧನ ಸಲಕರಣೆಗಳನ್ನು ಒದಗಿಸಲಾಗುತ್ತಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 222 ಐಸಿಡಿ 2020



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 878 |
| ಸದಸ್ಯರ ಹೆಸರು | : | ಶ್ರೀ ರಿಜ್ವಾನ್ ಅರ್ಷದ್ (ಶಿವಾಜಿನಗರ) |
| ಉತ್ತರಿಸಬೇಕಾದ ದಿನಾಂಕ | : | 09-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | 1916 ರ ವರೆಗೆ ರಾಜ್ಯದಲ್ಲಿ ಪಿಹೆಚ್‌ಡಿ ಮತ್ತು ಎಂ.ಫಿಲ್ ವ್ಯಾಸಂಗ ಮಾಡುವ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಜೆ.ಆರ್.ಎಫ್ ಮಾದರಿಯಲ್ಲಿ ಕ್ರಮವಾಗಿ ಎರಡು ವರ್ಷಗಳ ಅವಧಿಗೆ ಮಾಹೆಯಾನ ರೂ.25,000/- ಹಾಗೂ ವರ್ಷಕ್ಕೆ ಒಂದು ಬಾರಿ ರೂ.10.000/- ಗಳ ಶಿಷ್ಯ ವೇತನದ ನಿರ್ವಹಣಾ ವೆಚ್ಚವನ್ನು ಭರಿಸುತ್ತಿದ್ದುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಡ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಜೆ.ಆರ್.ಎಫ್ ಮಾದರಿಯಲ್ಲಿ ವಾರ್ಷಿಕ ರೂ.1.00 ಲಕ್ಷಗಳನ್ನು ಎರಡು ವರ್ಷಗಳ ಅವಧಿಗೆ ಮಾತ್ರ ನೀಡಲು ದಿನಾಂಕ:24.01.2017 ರಂದು ಆದೇಶ ಹೊರಡಿಸಿ ಪರಿಷ್ಕರಿಸಿರುವುದಕ್ಕೆ ಕಾರಣಗಳೇನು; | ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಶುಲ್ಕ ಮರುಪಾವತಿ ಯೋಜನೆಯಡಿ (1)ಮೆಟ್ರಿಕ್ ಪೂರ್ವ, (2) ಮೆಟ್ರಿಕ್ ನಂತರ, (3) ಮೆರಿಟ್ ಕಮ್ ಮೀನ್ಸ್ ವಿದ್ಯಾರ್ಥಿವೇತನ, (4)ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ (5) ಎಂಫಿಲ್ ಮತ್ತು ಪಿಹೆಚ್‌ಡಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವು ನೀಡುವ ಕಾರ್ಯಕ್ರಮವಿದೆ.<br><br>ಈ ಹಿಂದಿನ ವರ್ಷಗಳಲ್ಲಿ ಮೇಲಿನ ವಿದ್ಯಾರ್ಥಿವೇತನಗಳಿಗೆ ಈ ಕೆಳಕಂಡ ಆಯವ್ಯಯವನ್ನು ಒದಗಿಸಲಾಗಿತ್ತು<br>(ರೂ.ಕೋಟಿಗಳಲ್ಲಿ)<br>ವರ್ಷ — ಆಯವ್ಯಯ<br>2017-18 — 29.00<br>2018-19 — 290.00<br>2019-20 — 275.00<br>2019-20 ಪರಿಷ್ಕೃತ — 125.00<br><br>ಹಿಂದಿನ ವರ್ಷಗಳಲ್ಲಿ ವಿದ್ಯಾರ್ಥಿವೇತನಕ್ಕಾಗಿ ಸಂಪೂರ್ಣ ಅನುದಾನ ನೀಡುತ್ತಿದ್ದರಿಂದ ಎಂಫಿಲ್ & ಪಿಹೆಚ್‌ಡಿ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ.25,000/-ಗಳನ್ನು ಹಾಗೂ ವಾರ್ಷಿಕ ನಿರ್ವಹಣೆಗೆ ರೂ.10,000/- ಗಳನ್ನು 3 ವರ್ಷಗಳಿಗೆ ನೀಡಲಾಗಿದೆ.<br>ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಯಡಿ ಕೇವಲ ರೂ.100.00ಕೋಟಿಗಳ ಆಯವ್ಯಯವನ್ನು ಒದಗಿಸಿದ್ದರಿಂದ ಅನುದಾನದ ಕೊರತೆಯಿಂದಾಗಿ ಸರ್ಕಾರದಿಂದ ಆದೇಶವನ್ನು ಪರಿಷ್ಕರಿಸಿ ಹೊರಡಿಸಲಾಗಿದೆ. |

| | | |
|---|---|---|
| ಆ. | ಸದರಿ ಶಿಷ್ಯ ವೇತನದ ಪರಿಷ್ಕರಣೆಯಿಂದ ಉನ್ನತ ವ್ಯಾಸಂಗ ನಡೆಸುತ್ತಿರುವ ಬಡ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ತೊಂದರೆಯುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಲವು ಅಲ್ಪಸಂಖ್ಯಾತರ ವಿದ್ಯಾರ್ಥಿಗಳು ಈ ಬಗ್ಗೆ ಮನವಿಯನ್ನು ಸಲ್ಲಿಸಿರುತ್ತಾರೆ. |
| ಇ | ಬಂದಿದ್ದಲ್ಲಿ, ಉನ್ನತ ವ್ಯಾಸಂಗದಲ್ಲಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ಹೊರತುಪಡಿಸಿ, ಇನ್ನಿತರ ವಿದ್ಯಾರ್ಥಿಗಳು ಆರ್.ಜೆಎನ್‌ಎಫ್, ಎಸ್‌ಆರ್‌ಎಫ್ ಮತ್ತು ಐಎನ್‌ಎಸ್‌ಪಿಐಆರ್‌ಇ, ಸಿಎಸ್‌ಐಆರ್, ಜಿಓಐ, ಮೌಲಾನ ಇವುಗಳಿಂದ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಶಿಷ್ಯವೇತನ ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಉನ್ನತ ವ್ಯಾಸಂಗದಲ್ಲಿನ ವಿದ್ಯಾರ್ಥಿಗಳನ್ನು ವಿದ್ಯಾರ್ಥಿಗಳಿಗೆ ಕೇಂದ್ರ ಸರ್ಕಾರದಿಂದ ನೀಡುತ್ತಿರುವ ಅನುದಾನದ ವಿವರ ಈ ಕೆಳಕಂಡಂತಿದೆ.<br>1 — INSPIRE — ವಿಶ್ವ ವಿದ್ಯಾನಿಲಯದಲ್ಲಿ ಪ್ರಥಮ ಸ್ಥಾನ ಪಡೆದಿರುವ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ.25,000/-.<br>2 — CSIR — ಕೇಂದ್ರ ಸರ್ಕಾರದಿಂದ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ.31,000/-ಗಳು<br>3 — MOULANA — ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಕೇಂದ್ರ ಸರ್ಕಾರದಿಂದ ಮಾಹೆಯಾನ ರೂ.25,000/-ಗಳನ್ನು ನೀಡಲಾಗುತ್ತಿದೆ. |
| ಈ | ಹಾಗಿದ್ದಲ್ಲಿ, ಈ ತಾರತಮ್ಯವನ್ನು ಸರಿಪಡಿಸಿ ಪಿಹೆಚ್‌ಡಿ ಮತ್ತು ಎಂಫಿಲ್ ವ್ಯಾಸಂಗ ನಡೆಸುತ್ತಿರುವ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ಸಂಶೋಧನಾ ಹಾಗೂ ಇನ್ನಿತರ ನಿರ್ವಹಣಾ ವೆಚ್ಚವನ್ನು ಭರಿಸಲು ಅವರುಗಳ ಶಿಷ್ಯವೇತನವನ್ನು ಹೆಚ್ಚಿಸುವ ನಿರ್ಧಾರವನ್ನು ಸರ್ಕಾರ ಕೈಗೊಳ್ಳುವುದೇ? | ಪರಿಶೀಲನಾ ಹಂತದಲ್ಲಿದೆ. |

**ಸಂಖ್ಯೆ: MWD 167 LMQ 2020**

**(ಶ್ರೀಮಂತ ಬಾಳಾಸಾಹೇಬ ಪಾಟೀಲ್)**
ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: | 124 |
| ಸದಸ್ಯರ ಹೆಸರು | ಶ್ರೀ ಮಹದೇವಪ್ಪ ಶಿವಲಿಂಗಪ್ಪ ಯಾದವಾಡ್ (ರಾಮದುರ್ಗ) |
| ಉತ್ತರಿಸಬೇಕಾದ ದಿನಾಂಕ: | 09.12.2020 |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | 2019-2020ನೇ ಸಾಲಿನಲ್ಲಿ ಮಳೆ ಅತಿವೃಷ್ಠಿಯಿಂದ ರಾಮದುರ್ಗ ತಾಲ್ಲೂಕಿನಲ್ಲಿ ಹಾಳಾಗಿರುವ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಸರ್ಕಾರವು ನೀಡಿರುವ ಅನುದಾನ ಎಷ್ಟು; | 2019-20ನೇ ಸಾಲಿನಲ್ಲಿ ಮಳೆ ಮತ್ತು ಪ್ರವಾಹದಿಂದ ರಾಮದುರ್ಗ ತಾಲ್ಲೂಕಿನಲ್ಲಿ ಹಾಳಾಗಿರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ರೂ. 600.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲಾಗಿದೆ. |
| ಆ | ಪ್ರಸ್ತುತ ಮಂಜೂರಾಗಿರುವ ಅನುದಾನದಲ್ಲಿ ಹಾಳಾಗಿರುವ ಗ್ರಾಮೀಣ ರಸ್ತೆಗಳನ್ನು ಸರಿಪಡಿಸಲಾಗುವುದೇ; (ವಿವರ ಒದಗಿಸುವುದು) | ರಾಮದುರ್ಗ ತಾಲ್ಲೂಕಿನಲ್ಲಿ ಹಾಳಾಗಿರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಮಂಜೂರಾತಿ ನೀಡಿರುವ ರೂ. 600.00 ಲಕ್ಷಗಳಲ್ಲಿ ಕ್ರಿಯಾ ಯೋಜನೆಯನ್ನು ತಯಾರಿಸಿ ಅನುಷ್ಠಾನದ ಪ್ರಕ್ರಿಯೆ ಪ್ರಗತಿಯಲ್ಲಿದೆ. ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ | ಹಾಳಾಗಿರುವ ಈ ಗ್ರಾಮೀಣ ರಸ್ತೆಗಳನ್ನು ದುರಸ್ತಿಗೊಳಿಸಲು ವಿಶೇಷ ಅನುದಾನ ಬಿಡುಗಡೆಗೊಳಿಸಲು ಸರ್ಕಾರ ಯಾವ ಕ್ರಮ ತೆಗೆದುಕೊಂಡಿದೆ? (ವಿವರ ನೀಡುವುದು) | ಈಗಾಗಲೇ ಹಾಳಾಗಿರುವ ರಸ್ತೆಗಳನ್ನು ದುರಸ್ತಿಗೊಳಿಸುವ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಅನುದಾವನ್ನು ಕಾಮಗಾರಿಗಳ ಭೌತಿಕ ಪ್ರಗತಿಯನ್ನು ಮತ್ತು ಲಭ್ಯತೆಯನ್ನಾಧರಿಸಿ ಬಿಡುಗಡೆ ಮಾಡಬೇಕಿದೆ. |

ಕಡತ ಸಂಖ್ಯೆ:ಗ್ರಾಅಪ:ಅಧಿ-08/1:ಆರ್‌ಆರ್‌ಸಿ:2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಗ್ರಾಮೀಣ ರಸ್ತೆ ಕಾಮಗಾರಿ ವಿಶೇಷ ಅನುದಾನ (2020-21) ಲೆಕ್ಕ ಶೀರ್ಷಿಕೆ 5054 (ಕಿತ್ತೂರ ಮತ್ತು ರಾಮದುರ್ಗ) ಕಾಮಗಾರಿಗಳ ಪ್ರಗತಿ ವರದಿ ನವ್ಹೆಂಬರ್-2020 ರ ಅಂತ್ಯದವರೆಗಿನ ಪ್ರಗತಿ ಪತ್ರಿಕೆ

| ಕ್ರ ಸಂ | ಜಿಲ್ಲೆ | ಕ್ಷೇತ್ರ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ ಲಕ್ಷಗಳಲ್ಲಿ) | ಟೆಂಡರಿಗಾಗಿ ಇಟ್ಟ ಮೊತ್ತ | 2020-21 ನೇ ಸಾಲಿಗೆ ಬಿಡುಗಡೆ ಯಾದ ಅನುದಾನ | ಆಂ.ಪ. ಮಂಜೂರಾತಿ ಸಂಖ್ಯೆ & ದಿನಾಂಕ: | ಗುತ್ತಿಗೆದಾರರ ಹೆಸರು | ಕಾರ್ಯಾದೇಶ ನೀಡಿದ ದಿನಾಂಕ | ಕೆಲಸ ಮುಕ್ತಾಯ ದಿನಾಂಕ | ಭೌತಿಕ ಸಾಧನೆ | | 2020-21ನೇ ಸಾಲಿನಲ್ಲಿ | | | ಪ್ರಾರಂಭ ದಿಂದ ಇಲ್ಲಿಯವರೆ ಗಿನ ವೆಚ್ಚ | ಷರಾ |
|---|---|---|---|---|---|---|---|---|---|---|---|---|---|---|---|---|---|
| | | | | | | | | | | | ಗುರಿ | ಸಾಧನೆ | ಹಿಂದಿನ ತಿಂಗಳವರೆಗೆ ಆದ ವೆಚ್ಚ | ಪ್ರಸ್ತುತ ತಿಂಗಳಿನ ವೆಚ್ಚ | ಪ್ರಸಕ್ತ ಸಾಲಿನ ಒಟ್ಟು ವೆಚ್ಚ | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 |
| ರಾಮದುರ್ಗ ತಾಲೂಕು | | | | | | | | | | | | | | | | | |
| 0 | | | | | | | | | | | | | | | | | |
| 1 | ಬೆಳಗಾವಿ | ರಾಮದುರ್ಗ | ಉಜ್ಜನಕೊಪ್ಪ ರೈನಾಪೂರ ರಸ್ತೆ ಸುಧಾರಣೆ. | 150.00 | 125.71 | 0.00 | 123 ಡಿಸೆಂಬರ 2019 | ಶ್ರೀ ಪ್ರಕಾಶ ಚಾವಲಿ | 5969 23-3-2020 | 22-9-2020 | 3.00 | - | 0.00 | 0.00 | 0.00 | 0.00 | 3 ಕಿಮಿ ಮುರಮ್ ವರ್ಗ-2 & 3 ಖಡೀಕರಣ ಡಾಂಬರೀಕರಣ ಸಿ.ಡಿ. |
| 1 | | | ಒಟ್ಟು :- | 150.00 | 125.71 | 0.00 | | | | | 3.00 | 0.00 | 0.00 | 0.00 | 0.00 | 0.00 | |
| ಗ್ರಾಅಪ/97/9:ಆರ್‌ಆರ್‌ಸಿ:2019 ಬೆಂಗಳೂರು ದಿನಾಂಕ:- 26-09-2019 | | | | | | | | | | | | | | | | | |
| ಪ್ಯಾಕೇಜ್ ನಂ . 1 (73388) | | | | | | | | | | | | | | | | | |
| 1 | ಬೆಳಗಾವಿ | ರಾಮದುರ್ಗ | ಹಣಮಸಾಗರ ಅರ್ಟಗಲ್ ರಸ್ತೆ ಸುಧಾರಣೆ. | 50.00 | 96.95 | 0.00 | 84 ನವ್ಹೆಂಬರ 2019 | ಶ್ರೀ ಮಾರುತಿ ಹವಾಲ್ದಾರ | 5324 28-2-2020 | 27-8-2020 | 3.60 | - | 0.00 | 0.00 | 0.00 | 0.00 | ಕೆಲಸ ಪ್ರಗತಿ ರೂ. 28.93 ಬಿಲ್ಲ ಸ್ವಿಕೃತಗೊಂಡಿದೆ |
| ೨ | ಬೆಳಗಾವಿ | ರಾಮದುರ್ಗ | ತೋರಣಗಟ್ಟಿ ಪದಮಂಡಿ ರಸ್ತೆ ಸುಧಾರಣೆ. | 60.00 | | 0.00 | 83 ನವ್ಹೆಂಬರ 2019 | | | | 2.00 | - | | | | | |
| ೨ | | | ಒಟ್ಟು :- | 110.00 | 96.95 | 0.00 | | | | | 5.00 | 0.00 | 0.00 | 0.00 | 0.00 | 0.00 | |
| ಪ್ಯಾಕೇಜ್ ನಂ . 2 (73502) | | | | | | | | | | | | | | | | | |
| 1 | ಬೆಳಗಾವಿ | ರಾಮದುರ್ಗ | ಮುರಕಟ್ನಾಳ ಚಂದರಗಿ ರಸ್ತೆ ಸುಧಾರಣೆ. | 30.00 | 52.86 | 0.00 | 104 ನವ್ಹೆಂಬರ 2019 | ಶ್ರೀ ಪಾಂಡಪ್ಪ ಎಲ್ ನಾಯಕ | 5845 17-3-2020 | 16-9-2020 | 1.10 | - | 0.00 | 0.00 | 0.00 | 0.00 | ಗ್ರೇಡ್ 2 ಮೇಟಲಿಂಗ್ ಕೆಲಸ ಪ್ರಗತಿ |
| ೨ | ಬೆಳಗಾವಿ | ರಾಮದುರ್ಗ | ಚಂದರಗಿ ಗುದಕೊಪ್ಪ ರಸ್ತೆ ಸುಧಾರಣೆ. | 30.00 | | 0.00 | 106 ನವ್ಹೆಂಬರ 2019 | | | | 0.70 1 ಸಿಡಿ | - | | | | | ಗ್ರೇಡ್ 3 ಕೆಲಸ ಪ್ರಗತಿ |
| ೨ | | | ಒಟ್ಟು :- | 60.00 | 52.86 | 0.00 | | | | | 1.70 1 ಸಿಡಿ | 0.00 | 0.00 | 0.00 | 0.00 | 0.00 | |

| [illegible] | [illegible] | [illegible] | [illegible] | [illegible] ಮೊತ್ತ (ರೂ ಲಕ್ಷಗಳಲ್ಲಿ) | [illegible] ಮೊತ್ತ | 2020-21 ನೇ ಸಾಲಿಗೆ ಬಿಡುಗಡೆ ಯಾದ ಅನುದಾನ | ಅಂ.ಪ. ಮಂಜೂರಾತಿ ಸಂಖ್ಯೆ & ದಿನಾಂಕ: | ಗುತ್ತಿಗೆದಾರರ ಹೆಸರು | ಕಾರ್ಯಾದೇಶ ನೀಡಿದ ದಿನಾಂಕ | ಕೆಲಸ ಮುಕ್ತಾಯ ದಿನಾಂಕ | ಭೌತಿಕ ಸಾಧನೆ | | 2020-21ನೇ ಸಾಲಿನಲ್ಲಿ | | | ಪ್ರಾರಂಭ ದಿಂದ ಇಲ್ಲಿಯವರೆಗಿನ ವೆಚ್ಚ | ಷರಾ |
|---|---|---|---|---|---|---|---|---|---|---|---|---|---|---|---|---|---|
| | | | | | | | | | | | ಗುರಿ | ಸಾಧನೆ | ಹಿಂದಿನ ತಿಂಗಳವರೆಗೆ ಆದ ವೆಚ್ಚ | ಪ್ರಸ್ತುತ ತಿಂಗಳಿನ ವೆಚ್ಚ | ಪ್ರಸಕ್ತ ಸಾಲಿನ ಒಟ್ಟು ವೆಚ್ಚ | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 |
| ಪ್ಯಾಕೇಜ್ ನಂ . 3 (73503) | | | | | | | | | | | | | | | | | |
| 1 | ಬೆಳಗಾವಿ | ರಾಮದುರ್ಗ | ಮುದಕವಿ ಚಕ್ರ ರಸ್ತೆ ಸುಧಾರಣೆ | 40.00 | **78.34** | 0.00 | 98 ನವ್ಹೆಂಬರ 2019 | ಶ್ರೀ ಎಸ್ ಎ ಶೆಟ್ಟಿಸದಾವರ್ತಿ | 5663 9-3-2020 | 8-9-2020 | 0.55 2 ಸಿಡಿ | - | 0.00 | 0.00 | 0.00 | 0.00 | ಗ್ರೇಡ್ 2 & 3 ಮೇಟಲಿಂಗ್ ಕೆಲಸ ಪ್ರಗತಿ ರೂ. 9.9 ಜಿಲ್ಲ ಸ್ವಿಕೃತಗೊಂಡಿದೆ |
| 2 | ಬೆಳಗಾವಿ | ರಾಮದುರ್ಗ | ಬಟಕುರ್ಕಿ ವರ್ಚಗಲ್ ರಸ್ತೆ ಸುಧಾರಣೆ. | 50.00 | | 0.00 | 82 ನವ್ಹೆಂಬರ 2019 | | | | 1.35 | - | | | | | |
| 2 | | | ಒಟ್ಟು :- | **90.00** | **78.34** | **0.00** | | | | | **1.90 2 ಸಿಡಿ** | **0.00** | **0.00** | **0.00** | **0.00** | **0.00** | |
| ಪ್ಯಾಕೇಜ್ ನಂ . 4 (73501) | | | | | | | | | | | | | | | | | |
| 1 | ಬೆಳಗಾವಿ | ರಾಮದುರ್ಗ | ತೋರಣಗಟ್ಟಿ ಕ್ರಾಸ್ ದಿಂದ ನಳದ ಬಾವಿವರೆಗೆ ರಸ್ತೆ ಸುಧಾರಣೆ. | 10.00 | **52.29** | 0.00 | 136 ನವ್ಹೆಂಬರ 2019 | ಶ್ರೀ ಎಮ್ ಆರ್ ತುಪ್ಪದ | 4796 5-2-2020 | 4-8-2020 | **0.60** | - | **0.00** | **0.00** | **0.00** | **0.00** | ಸ್ಥಳ ತಕರಾರು |
| 2 | ಬೆಳಗಾವಿ | ರಾಮದುರ್ಗ | ಕಟಕೋಳ ಗ್ರಾಮದ ಕೆಂಪನಹಟ್ಟಿ ಶಂಭು ಹಳ್ಳದಿಂದ ತಮಿನಿವರೆಗೆ ರಸ್ತೆ ಸುಧಾರಣೆ. | 15.00 | | 0.00 | 96 ನವ್ಹೆಂಬರ 2019 | | | | **2.40** | **2.40** | | | | | ಕೆಲಸ ಮುಗಿದಿದೆ ರೂ. 30.49 ಜಿಲ್ಲ ಸ್ವಿಕೃತಗೊಂಡಿದೆ |
| 3 | ಬೆಳಗಾವಿ | ರಾಮದುರ್ಗ | ಕಟಕೋಳ ಗ್ರಾಮದ ಪೆಟ್ರೋಲ್ ಪಂಪನಿಂದ ಕೆನಾಲವರೆಗೆ ರಸ್ತೆ ಸುಧಾರಣೆ. | 15.00 | | 0.00 | 94 ನವ್ಹೆಂಬರ 2019 | | | | **1.00** | - | | | | | ಕೆಲಸ ಪ್ರಗತಿ |
| 4 | ಬೆಳಗಾವಿ | ರಾಮದುರ್ಗ | ಕಟಕೋಳ ಗ್ರಾಮದ ಕಟಿಮ್ಮನ ಮಾರ್ಗ ರಸ್ತೆ ಸುಧಾರಣೆ. | 20.00 | | 0.00 | 86 ನವ್ಹೆಂಬರ 2019 | | | | **2.00** | **2.00** | | | | | ಕೆಲಸ ಮುಗಿದಿದೆ |
| 4 | | | ಒಟ್ಟು :- | **60.00** | **52.29** | **0.00** | | | | | **6.00** | **4.40** | **0.00** | **0.00** | **0.00** | **0.00** | |
| 1 | ಬೆಳಗಾವಿ | ರಾಮದುರ್ಗ | ಬುದ್ನಿ ಹಲಕಿ ಚಕ್ರ ರಸ್ತೆ ಸುಧಾರಣೆ. (73389) | 30.00 | 26.31 | 0.00 | 103 ನವ್ಹೆಂಬರ 2019 | ಶ್ರೀ. ಪ್ರಕಾಶ ಬಿ ನಾಲಾಪರೋಶಿ | 5675 9-3-2020 | 8-9-2020 | 0.75 | - | 0.00 | 0.00 | 0.00 | 0.00 | ಗ್ರೇಡ್ 3 ಕೆಲಸ ಪ್ರಗತಿ |
| 2 | ಬೆಳಗಾವಿ | ರಾಮದುರ್ಗ | ಕಟಕೋಳ ಗ್ರಾಮದ ಉಪ್ಪಾರ ಪೇಟೆ ರಸ್ತೆ ಸುಧಾರಣೆ. (73500) | 10.00 | 8.69 | 0.00 | 135 ನವ್ಹೆಂಬರ 2019 | ಶ್ರೀ. ಪ್ರಕಾಶ ಡಿ ರಾಠೋಡ | 4969 12-2-2020 | 11-8-2020 | 1.00 | 1.00 | 0.00 | 0.00 | 0.00 | 0.00 | ಕೆಲಸ ಮುಗಿದಿದೆ ರೂ. 8.19 ಜಿಲ್ಲ ಸ್ವಿಕೃತಗೊಂಡಿದೆ |
| 3 | ಬೆಳಗಾವಿ | ರಾಮದುರ್ಗ | ಹಣಮಸಾಗರ, ಚುಂಚನೂರು (ಜ್ಯೋತೆಮ್ಮ ಮಾರ್ಗ) ರಸ್ತೆ ಸುಧಾರಣೆ. (73391) | 50.00 | 43.62 | **0.00** | 85 ನವ್ಹೆಂಬರ 2019 | ಶ್ರೀ. ಕೃಷ್ಣಪ್ಪ ಬಾಳಪ್ಪ ಪಮ್ಮಾರ | 4684 31-1-2020 | 30-4-2020 | 2.00 | 2.00 | 0.00 | 0.00 | 0.00 | 0.00 | ಕೆಲಸ ಮುಗಿದಿದೆ |
| 4 | ಬೆಳಗಾವಿ | ರಾಮದುರ್ಗ | ಹುಲಕುಂದ ಮುನ್ನಿಕೇರಿ ರಸ್ತೆ ಸುಧಾರಣೆ. (73390) | 40.00 | 0.00 | 0.00 | 105 ನವ್ಹೆಂಬರ 2019 | ಶ್ರೀ. ಪ್ರಕಾಶ ರಾಠೋಡ | 6000 23-3-2020 | 22-9-2020 | 2.70 | - | 0.00 | 0.00 | 0.00 | 0.00 | ಗ್ರೇಡ್ 3 ಕೆಲಸ ಪ್ರಗತಿ |
| 4 | | | ಒಟ್ಟು :- | **130.00** | **78.62** | **0.00** | | | | | 6.45 | 3.00 | **0.00** | **0.00** | **0.00** | **0.00** | |
| 15 | | | **ರಾಮದುರ್ಗ ಮತಕ್ಷೇತ್ರದ ಒಟ್ಟು :-** | 600.00 | 484.77 | 0.00 | | | | | **16.05 3 ಸಿಡಿ** | 0.00 | **0.00** | **0.00** | 0.00 | 0.00 | |

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: | 128 |
| ಸದಸ್ಯರ ಹೆಸರು | ಶ್ರೀ ಅಪ್ಪಚ್ಚು ರಂಜನ್ ಎಂ.ಪಿ (ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ: | 09.12.2020 |

<table>
<tr><th>ಕ್ರ. ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ</td><td>ಕೊಡಗಿನಲ್ಲಿ ಕಳೆದ ಮೂರು ವರ್ಷಗಳಿಂದ ಹಾಗೂ ಪ್ರಸಕ್ತ ವರ್ಷ ಬಿದ್ದ ಭಾರಿ ಮಳೆಯಿಂದ ರಸ್ತೆಗಳು, ಕೆರೆ ಕಟ್ಟೆಗಳು ಸೇತುವೆಗಳು ಹಾಳಾಗಿ ಸಂಚಾರಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ:<br><br>ಬಂದಿದ್ದಲ್ಲಿ ಸರ್ಕಾರದಿಂದ ಎಷ್ಟು ಅನುದಾನ ಮೀಸಲಿಡಲಾಗಿದೆ. ವಿಶೇಷ ಅನುದಾನ ನೀಡಲು ಸರ್ಕಾರ ತೆಗೆದುಕೊಂಡ ಕ್ರಮವೇನು (ಸಂಪೂರ್ಣ ವಿವರ ನೀಡುವುದು)</td><td>ಕೊಡಗಿನಲ್ಲಿ ಕಳೆದ ಮೂರು ವರ್ಷದಿಂದ ಹಾಗೂ ಪ್ರಸಕ್ತ ವರ್ಷದ ಮಳೆಯಿಂದ ರಸ್ತೆಗಳು ಮತ್ತು ಸೇತುವೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಸರ್ಕಾರವು ಇದಕ್ಕಾಗಿ ಮೀಸಲಿಟ್ಟ ಬಿಡುಗಡೆ ಮಾಡಿದ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತವೆ:<br><br>
<table>
<tr><th>ಕ್ರ.ಸಂ</th><th>ವರ್ಷ</th><th>ಸರ್ಕಾರ ಅನುಮೋದಿಸಿದ ಕಾಮಗಾರಿಗಳ ಸಂಖ್ಯೆ</th><th>ಮೀಸಲಿಟ್ಟ ಅನುದಾನ (ರೂ. ಲಕ್ಷಗಳಲ್ಲಿ)</th><th>ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ)</th></tr>
<tr><td>01</td><td>2018-19</td><td>17</td><td>421.41</td><td>421.41</td></tr>
<tr><td>02</td><td>2019-20</td><td>863</td><td>8905.89</td><td>3350.00</td></tr>
</table>
<br>ಪ್ರಸ್ತುತ ಸಾಲಿನಲ್ಲಿ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳ ವಿವರಗಳನ್ನು ಮುಖ್ಯ ಇಂಜಿನಿಯರ್, ಪಿ.ಆರ್.ಇ.ಡಿ. ಹಾಗೂ ಮುಖ್ಯ ಕಾರ್ಯಾಚರಣೆ ಅಧಿಕಾರಿಗಳು, ಕೆ.ಆರ್.ಆರ್.ಡಿ.ಎ ರವರುಗಳಿಂದ ಪಡೆದು ಕ್ರೋಢೀಕರಿಸಿ ರೂ.110531.61 ಲಕ್ಷಗಳ ಅನುದಾನಕ್ಕೆ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ರವರಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಇದರಲ್ಲಿ ಕೊಡಗು ಜಿಲ್ಲೆಗೆ ತಾಲ್ಲೂಕಿನ ರಸ್ತೆ ಕಾಮಗಾರಿಗಳಿಗೆ ರೂ.20300.30 ಲಕ್ಷಗಳು ಸೇತುವೆಗಳಿಗಾಗಿ ರೂ.10576.50 ಲಕ್ಷಗಳು ಸೇರಿರುತ್ತದೆ.<br><br>ಅನುದಾನ ಬಿಡುಗಡೆಯಾದ ನಂತರ ರಸ್ತೆಗಳ ಅಭಿವೃದ್ಧಿಗೆ ಅನುದಾನವನ್ನು ಹಂಚಿಕೆ ಮಾಡಬೇಕಾಗಿದೆ.</td></tr>
<tr><td>ಆ</td><td>ಗ್ರಾಮ ಪಂಚಾಯತಿಗಳಲ್ಲಿ 11ಬಿ</td><td>ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ಧವಲ್ಲದ ಆಸ್ತಿಗಳಿಗೆ</td></tr>
</table>

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | ಖಾತೆಗಳು ನೊಂದಣಿ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; 11ಬಿ ಖಾತೆಯ ಪರಬಾರೆ ನಡೆಸಲು ಸರ್ಕಾರ ಹಿಂಪಡೆಯಲು ಕಾರಣವೇನು; ಗ್ರಾಮ ಪಂಚಾಯತಿಗಳಲ್ಲಿ 11ಬಿ ಖಾತೆ ಮಾಡಿಕೊಂಡು ಪರವಾನಿಗೆ ಪಡೆದುಕೊಂಡ ನಂತರ ಬ್ಯಾಂಕ್‌ಗಳು ಇಂತಹ ಖಾತೆಗಳಿಗೆ ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಂದರೆ ದಿನಾಂಕ:14-06-2013 ರೊಳಗೆ ಒಂದು ಬಾರಿ ಕ್ರಯವಾಗಿರುವ ನಿವೇಶನಗಳು, ಕಟ್ಟಡಗಳಿಗೆ ಹಳೆಯ 6 ತಿಂಗಳ ಪೂರ್ವದ ಯಾವುದಾದರೂ ಒಂದು ತಿಂಗಳ ವಿದ್ಯುತ್‌ಬಿಲ್‌ನ್ನು ಪಡೆದು ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ-11ಬಿ ನೀಡಲಾಗುತ್ತಿದ್ದು, ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಾಯಿಸಬಹುದಾಗಿದೆ.<br><br>ದಿನಾಂಕ: 14-06-2013 ರ ನಂತರ ಜಿಲ್ಲಾಧಿಕಾರಿಗಳಿಂದ ಭೂಪರಿವರ್ತನೆಯಾಗಿ ಲೇ ಔಟ್ ಅನುಮೋದನೆಯಾಗದ ಆಸ್ತಿಗಳಿಗೆ ಪೂರ್ಣ ಜಮೀನಿಗೆ ತೆರಿಗೆ ಉದ್ದೇಶಕ್ಕಾಗಿ ನಮೂನೆ 11 ಬಿ ನೀಡಲಾಗುತ್ತಿದೆ. ಈ ಆಸ್ತಿಗಳನ್ನು ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಾಯಿಸಲು ಅವಕಾಶವಿರುವುದಿಲ್ಲ.<br><br>ಕ್ರಮಬದ್ಧವಲ್ಲದ ಆಸ್ತಿಗಳಿಗೆ ಬ್ಯಾಂಕ್‌ಗಳು ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಇ | ಕೊಡಗು ಜಿಲ್ಲೆಯಲ್ಲಿನ ಎಷ್ಟು ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಕ ಕಸ ವಿಲೇವಾರಿ ಘಟಕ ಮಂಜೂರಾಗಿದೆ. ಇದರಲ್ಲಿ ಕಾರ್ಯಾರಂಭ ಮಾಡಿಸುವ ಘಟಕವೆಷ್ಟು ಹಾಗೂ ಬಾಕಿ ಇರುವ ಘಟಕವನ್ನು ಯಾವಾಗ ಪ್ರಾರಂಭ ಮಾಡಲಾಗುವುದು (ಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಒಟ್ಟು 104 ಗ್ರಾಮ ಪಂಚಾಯತಿಗಳಿದ್ದು, ಸ್ವಚ್ಛ ಭಾರತ್ ಮಿಷನ್ (ಗ್ರಾ) ಯೋಜನೆಯಡಿ 104 ಗ್ರಾಮ ಪಂಚಾಯತಿಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಯ ವಿಸ್ತೃತ ಯೋಜನಾ ವರದಿಗಳಿಗೆ (ಡಿಪಿಆರ್) ಅನುಮೋದನೆ ನೀಡಲಾಗಿರುತ್ತದೆ. ಈ ಪೈಕಿ 28 ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಕವಾಗಿ ತ್ಯಾಜ್ಯ ಸಂಸ್ಕರಣೆ ಮಾಡಲಾಗುತ್ತಿದೆ ಹಾಗೂ ಇನ್ನುಳಿದ ಗ್ರಾಮ ಪಂಚಾಯತಿಗಳಲ್ಲಿ ಪ್ರಸ್ತುತ ತಾತ್ಕಾಲಿಕ ಕಟ್ಟಡವನ್ನು ಗುರುತಿಸಿ, ತ್ಯಾಜ್ಯ ಸಂಸ್ಕರಣೆ ಮತ್ತು ನಿರ್ವಹಣೆ ಮಾಡಲು ಕ್ರಮವಹಿಸಲಾಗಿದೆ.<br><br>ಈ ಪೈಕಿ 52 ಗ್ರಾಮ ಪಂಚಾಯತಿಗಳಿಗೆ ಜಾಗವನ್ನು ಮಂಜೂರು ಮಾಡಲು ಕಂದಾಯ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಪ್ರಸ್ತಾವನೆಯು ಕಂದಾಯ ಇಲಾಖೆಯ ವಿವಿಧ ಹಂತದಲ್ಲಿದ್ದು, ಅನುಮೋದನೆಗೆ ಕ್ರಮವಹಿಸಲಾಗುತ್ತಿದೆ. ಜಾಗದ ಅನುಮೋದನೆ ದೊರೆತ ನಂತರ ತ್ಯಾಜ್ಯ ವಿಲೇವಾರಿ ಘಟಕ ನಿರ್ಮಿಸಿ, ಕಾರ್ಯಾರಂಭ ಮಾಡಲಾಗುವುದು. |
| ಈ | ಗ್ರಾಮ ಪಂಚಾಯಿತಿಗಳಲ್ಲಿ ವೈಜ್ಞಾನಿಕವಾಗಿ ತಯಾರಾಗುವ ಗೊಬ್ಬರವನ್ನು ವಿಲೇವಾರಿ ಮಾಡಲು ಸರ್ಕಾರ ನಿಗದಿಪಡಿಸಿರುವ ಮಾರ್ಗಸೂಚಿಗಳೇನು? | ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಜವಾಗಿ ತಯಾರಾಗುವ ಗೊಬ್ಬರವನ್ನು ಗ್ರಾಮ ಪಂಚಾಯತಿ ಮಟ್ಟದಲ್ಲಿ ಮಾರಾಟ ಮಾಡಿ, ತ್ಯಾಜ್ಯ ನಿರ್ವಹಣೆ ಘಟಕದ ವೆಚ್ಚವನ್ನು ಅದರಲ್ಲಿ ಭರಿಸಿಕೊಳ್ಳಲು ಅವಕಾಶ ನೀಡಲಾಗಿದೆ.<br>ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯನ್ನು ಸೂಕ್ತ ರೀತಿಯಲ್ಲಿ ನಿರ್ವಹಣೆ ಮಾಡಲು ಕರ್ನಾಟಕ ರಾಜ್ಯ ನೈರ್ಮಲ್ಯ ಮತ್ತು ತ್ಯಾಜ್ಯ ನಿರ್ವಹಣಾ ನೀತಿ, ಕಾರ್ಯತಂತ್ರ ಮತ್ತು ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯ |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | ಮಾದರಿ ಉಪನಿಧಿಗಳು-2020" ಜಾರಿಗೆ ತಂದಿದ್ದು, ಅದರಂತೆ ಕ್ರಮ ವಹಿಸಲು ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿದೆ. |

ಕಡತ ಸಂಖ್ಯೆ:ಗ್ರಾಅಪ:ಅಧಿ-08/12:ಆರ್‌ಆರ್‌ಸಿ:2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ – 260
ಉತ್ತರಿಸಬೇಕಾದ ದಿನಾಂಕ – 09-12-2020
ಸದಸ್ಯರ ಹೆಸರು – ಶ್ರೀ.ಭೀಮಾ ನಾಯ್ಕ ಎಸ್. (ಹಗರಿಬೊಮ್ಮನಹಳ್ಳಿ)
ಉತ್ತರಿಸುವ ಸಚಿವರು – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಗರಿಬೊಮ್ಮನಹಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ವಿವಿಧ ಶಾದಿಮಹಲ್, ಮದರಸಾಗಳು, ಖಬರಸ್ತಾನಗಳು, ಮಸೀದಿಗಳು ಹಾಗೂ ದರ್ಗಾಗಳ ಜೀರ್ಣೋದ್ಧಾರಕ್ಕೆ ರೂ.13.00ಕೋಟಿ ಅನುದಾನ ಬಿಡುಗಡೆಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಅಲ್ಪಸಂಖ್ಯಾತರ ನಿರ್ದೇಶನಾಲಯ**<br>ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಶಾದಿಮಹಲ್ ಮತ್ತು ಮದರಸಾಗಳಿಗೆ ರೂ.129.00 ಲಕ್ಷಗಳು ಮಂಜೂರಾಗಿದ್ದು, ರೂ.29.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>**ಕರ್ನಾಟಕ ರಾಜ್ಯ ವಕ್ಫ್ ಮಂಡಳಿ**<br>ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಮದರಸಾಗಳು, ಖಬರಸ್ತಾನಗಳು, ಮಸೀದಿಗಳು ಹಾಗೂ ದರ್ಗಾಗಳ ದುರಸ್ತಿ ಮತ್ತು ಜೀರ್ಣೋದ್ಧಾರಕ್ಕಾಗಿ ಬಿಡುಗಡೆ ಮಾಡಲಾದ ವಿವರವನ್ನು ಅನುಬಂಧ–1ರಲ್ಲಿ ಒದಗಿಸಲಾಗಿದೆ. |
| ಆ) | ಬಂದಿದ್ದಲ್ಲಿ, ಶಾದಿಮಹಲ್, ಮದರಸಾಗಳು, ಖಬರಸ್ತಾನಗಳು ಮಸೀದಿಗಳು ಹಾಗೂ ದರ್ಗಾಗಳ ಜೀರ್ಣೋದ್ಧಾರಕ್ಕೆ ಅನುದಾನ ಬಿಡುಗಡೆಗೆ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | **ಅಲ್ಪಸಂಖ್ಯಾತರ ನಿರ್ದೇಶನಾಲಯ**<br>ಶಾದಿಮಹಲ್, ಮದರಸಾಗಳ ಅನುದಾನ ಬಿಡುಗಡೆ ಮಾಡಿರುವ ಬಗ್ಗೆ ಮಾಹಿತಿಯನ್ನು ಅನುಬಂಧ–2ರಲ್ಲಿ ಒದಗಿಸಲಾಗಿದೆ.<br>**ಕರ್ನಾಟಕ ರಾಜ್ಯ ವಕ್ಫ್ ಮಂಡಳಿ**<br>ಮದರಸಾಗಳು, ಖಬರಸ್ತಾನಗಳು ಮಸೀದಿಗಳು ಹಾಗೂ ದರ್ಗಾಗಳ ಜೀರ್ಣೋದ್ಧಾರಕ್ಕೆ ಅನುದಾನ ಬಿಡುಗಡೆ ಮಾಡಲು ಗ್ರ್ಯಾಂಟ್–ಇನ್–ಎಡ್ ನಡಿ ನಿಯಮಾನುಸಾರ ಕ್ರಮ ಕೈಗೊಂಡು ಅನುದಾನ ಬಿಡುಗಡೆ ~~ಮಾಡಲಾಗುತ್ತಿದೆ.~~ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ:MWD 160 LMQ 2020

(ಶ್ರೀಮಂತ ಬಾಳಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

J

ಅನುಬಂಧ - 1

260

RqR

2017-18

| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
|---|---|---|---|---|---|---|---|---|---|
| 1 | 19 | Macca Masjid, Ahle Hadis, H B Halli & Tq, Ballari Dt | Repair and Renovation of Masjid | MWD 50 WGA 2017, Dt: 13-12-2017 | Ballari | Hagari Bommanahalli | 2.00 | 2.00 | - |
| 2 | 1 | Jamia Masjid (Sunni) Kannihalli village H.B.Halli Taluk Ballari Dist | Repairs/Renovation of Masjid | MWD/15/WGA/2018 Dated: 12-03-2018 | Ballari | Hagari Bommanahalli | 1.50 | | 1.50 |
| 3 | 7 | Jamia Masjid (Sunni) Uttar Baga Tambarahalli Village (Tambrahalli) H.B.Halli Taluk Ballari District | Repairs and Renovation | MWD/15/WGA/2018 Dated: 12-03-2018 | Ballari | Hagari Bommanahalli | 2.00 | 2.00 | - |
| 4 | 14 | Jamia Masjid (Sunni) G.Kodihalli Village H.B.Halli Taluk Ballari Dist | Repairs/Renovation of Masjid | MWD/15/WGA/2018 Dated: 12-03-2018 | Ballari | Hagari Bommanahalli | 2.00 | 2.00 | - |

2018-19

| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
|---|---|---|---|---|---|---|---|---|---|
| | NIL | | | | | | | | |

2019-20

| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
|---|---|---|---|---|---|---|---|---|---|
| | NIL | | | | | | | | |

2020-21

| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
|---|---|---|---|---|---|---|---|---|---|
| 1 | 1 | Jamia Masjid Sunni G-Kodihalli Village, Hagaribommanahalli Taluk, Ballari District | Repair & Renovation | MWD 11 WGA 2020 DATED: 29.10.2020 | Ballari | Hagaribommanahalli | 10.00 | | 10.00 |

260

PwP

| 2017-18 | | | | | | | | | |
|---|---|---|---|---|---|---|---|---|---|
| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
| 1 | 31 | Jamia Masjid (Sunni), Thambrahalli Village, H B Halli Taluk, Ballari District | Construction of Compound wall | MWD/28/WGA/2017 DATED 28/08/2017 | Ballari | H B Halli | 5.00 | 5.00 | - |
| 2 | 16 | Muslim Khabrasthan (Sunni), Ambli Village, H B Halli Taluk, Ballari Dist | Construction of Compound Wall to Khabrasthan | MWD/61/WGA/2017 Dated 16/02/2018 | Ballari | H B Halli | 5.00 | 5.00 | - |

| 2018-19 | | | | | | | | | |
|---|---|---|---|---|---|---|---|---|---|
| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
| 1 | NIL | | | | | | | | |

| 2019-20 | | | | | | | | | |
|---|---|---|---|---|---|---|---|---|---|
| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
| 1 | 2 | Jamia Masjid (Sunni), Hagaribommanahalli Town and Taluk, Ballari Dist | Construction of compound wall to Masjid | MWD/05/WGA/2019 DATED 17/07/2019 | Ballari | Hagaribom manahalli | 5.00 | 5.00 | - |
| 2 | 78 | Muslim Khabrasthan sunni yenagi village H.B Halli tq. And ballari dist. | Construction of Compound wall | MWD/05/WES/2020 DATED 21/01/2020 | Ballari | H.B.Halli | 5.00 | 5.00 | - |

| 2020-21 | | | | | | | | | |
|---|---|---|---|---|---|---|---|---|---|
| Sl. No. | G.O. Sl. No. | Name of the Institution | Purpose | Govt. Order. No. & G. O. Date | District | Taluk | Amount Sanctioned (Rupees in lakhs) | Amount Released (Rupees in lakhs) | Balance (Rupees in lakhs) |
| | NIL | | | | | | | | |

